# "ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯ ವಿಶ್ಲೇಷಣೆ"

(ಎಂ.ಫಿಲ್. ಅಂಶಿಕ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಪ್ರಸನ್ನಕುಮಾರ್ ಎಂ.ಕೆ.

ಮಾರ್ಗದರ್ಶಕರು
ಡಾ. ರಹಮತ್ ತರೀಕೆರೆ
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ.






ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ -೫೮೩೨೭೬
೨೦೦೯

# "ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯ ವಿಶ್ಲೇಷಣೆ"

(ಎಂ.ಫಿಲ್. ಅಂಶಿಕ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಪ್ರಸನ್ನಕುಮಾರ್ ಎಂ.ಕೆ.

ಮಾರ್ಗದರ್ಶಕರು
ಡಾ. ರಹಮತ್ ತರೀಕೆರೆ
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ.







ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ –೫೮೩೨೭೬
೨೦೦೯

# ಮಾರ್ಗದರ್ಶಕರ ದೃಢೀಕರಣ ಪತ್ರ

**"ಶ್ರೀನಿವಾಸ ವೈದ್ಯರು 'ಹಳ್ಳ ಬಂತು ಹಳ್ಳ' ಕಾದಂಬರಿಯ ವಿಶ್ಲೇಷಣೆ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು **ಪ್ರಸನ್ನಕುಮಾರ್ ಎಂ.ಕೆ.** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಇವರು ಕನ್ನಡ ಸಾಹಿತ್ಯ ಅಧ್ಯಯನದ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಮನಃಪೂರ್ವಕವಾಗಿ ದೃಢೀಕರಿಸಿರುತ್ತೇನೆ.

ವಂದನೆಗಳೊಂದಿಗೆ,

(ಡಾ. ರಹಮತ್ ತರೀಕೆರೆ)
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ-೫೮೩೨೭೬

ದಿನಾಂಕ: 08-10-2009

ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

**"ಶ್ರೀನಿವಾಸ ವೈದ್ಯರು 'ಹಳ್ಳ ಬಂತು ಹಳ್ಳ' ಕಾದಂಬರಿಯ ವಿಶ್ಲೇಷಣೆ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ರಹಮತ್ ತರೀಕೆರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ. ಫಿಲ್. ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನದ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ವಂದನೆಗಳೊಂದಿಗೆ,

ಪ್ರಸನ್ನಕುಮಾರ್ ಎಂ.ಕೆ

ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ-೫೮೩೨೭೬

ದಿನಾಂಕ: 08-10-2009

ಸ್ಥಳ : ವಿದ್ಯಾರಣ್ಯ

# "ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯ ವಿಶ್ಲೇಷಣೆ"

## ಪರಿವಿಡಿ

# ಅಧ್ಯಾಯ-೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೧-ಅಧ್ಯಯನದ ಉದ್ದೇಶ

೧.೨-ಅಧ್ಯಯನದ ಮಹತ್ವ

೧.೩-ಅಧ್ಯಯನದ ವಿಧಾನ

೧.೪-ಅಧ್ಯಯನದ ಸಮೀಕ್ಷೆ

## ಅಧ್ಯಾಯ-೧.

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

### ೧.೧.ಪೀಠಿಕೆ

ಮಾನವ ಬದುಕಿನ ತಲ್ಲಣಗಳನ್ನು ಹಿಡಿಯುವ ಅತ್ಯುತ್ತಮ ಸಾಹಿತ್ಯವು ಯಾವಾಗಲೂ ನೀರಿನಂತೆ ಚಲನಶೀಲವಾದುದ್ದು. ಅದು ಮಾನವನ ಬದುಕಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ಕಲಾತ್ಮಕವಾಗಿ ಪ್ರತಿಬಿಂಬಿಸುತ್ತದೆ. ಸಮಾಜವಿಜ್ಞಾನಗಳು ನೀಡಲಾಗದ ಒಳನೋಟಗಳನ್ನು ನಮ್ಮ ಬದುಕಿನ ಬಗ್ಗೆ ನಮ್ಮ ಸಮಾಜದ ಬಗ್ಗೆ ಅದು ಕೊಡುತ್ತದೆ. ಆದ್ದರಿಂದಲೇ ಸಾಹಿತ್ಯವು ಕೇವಲ ಕಲೆಯ ಕೆಲಸವನ್ನು ಮಾತ್ರ ಮಾಡುತ್ತ ಬಂದಿಲ್ಲ. ಅದು ನಮ್ಮ ಸಮಾಜದಲ್ಲಿ ಸಮಾಜವನ್ನು ಕುರಿತ ಓದುಗರ ಸಂವೇದನೆಯನ್ನು ಸೂಕ್ಷ್ಮಗೊಳಿಸುವ ಕೆಲಸವನ್ನು ಸಹ ಮಾಡುತ್ತ ಬಂದಿದೆ.

ಆಧುನಿಕ ಕನ್ನಡ ಸಾಹಿತ್ಯವು ನವೋದಯ, ಪ್ರಗತಿಶೀಲ, ನವ್ಯ, ದಲಿತ ಮತ್ತು ಬಂಡಾಯ ಎಂಬ ನಾಲ್ಕು ಕಾಲಘಟ್ಟಗಳಲ್ಲಿ ಬೆಳೆದು ಬಂದಿದೆ. ಅದರಲ್ಲಿ ಅತ್ಯಂತ ಸಮೃದ್ಧವಾಗಿ ಬೆಳೆದಿರುವ ಸಾಹಿತ್ಯ ಪ್ರಕಾರವೆಂದರೆ ಕಾದಂಬರಿ; ಕನ್ನಡ ಕಾದಂಬರಿ ೨೦ನೇ ಶತಮಾನದ ಕರ್ನಾಟಕದ ಸಮಾಜದ ಸಾಮಾನ್ಯ ಜನರ ಬಾಳಿನ ವಿವಿಧ ಮಜಲುಗಳನ್ನು ಹಿಡಿದುಕೊಟ್ಟಿರುವ ಪ್ರಕಾರವಾಗಿದೆ. ಈ ಕಾರಣಕ್ಕೆ ಅದಕ್ಕೆ ಚಾರಿತ್ರಿಕ ಮಹತ್ವವು ಲಭಿಸಿದೆ. ಈ ಕಾರಣದಿಂದ ಅದು ಕನ್ನಡದಲ್ಲಿ ಬಹುಸಂಖ್ಯಾತ ಓದುಗರನ್ನು ಪಡೆದಿರುವ ಜನಪ್ರಿಯವಾದ ಸಾಹಿತ್ಯ ಪ್ರಕಾರವೂ ಆಗಿದೆ. ಅದು ಒಳಗೊಳ್ಳುತ್ತ ಬಂದಿರುವ ಬದುಕಿನ ಸಂತೋಷ ದುರಂತಗಳನು ನೋಡಿದರೆ, ಅದೊಂದು ಸಾಂಸ್ಕೃತಿಕವಾಗಿಯೂ ಮಹತ್ವದ ಪ್ರಕಾರವಾಗಿರುವುದು ತಿಳಿಯುತ್ತದೆ. ಕಾದಂಬರಿಯು ನಾಡಿನ ಬೇರೆಬೇರೆ ಸಮುದಾಯಗಳ ವಿಭಿನ್ನ ವರ್ಗಗಳ ಆಸೆ, ಆತಂಕ, ಅಭಿರುಚಿ, ಜೀವನ ಪಲ್ಲಟಗಳನ್ನು ಹಿಡಿದಿಟ್ಟುಕೊಡುವ ಮಾಧ್ಯಮವಾಗಿದೆ. ಕಾದಂಬರಿಕಾರರು ಪರೋಕ್ಷವಾಗಿ ನಾಡಿನ ಜನರ ಬದುಕನ್ನು ಹಲವಾರು ಮಗ್ಗುಲುಗಳಲ್ಲಿ ಹಿಡಿದಿಟ್ಟುಕೊಡುವ ಕೆಲಸ ಮಾಡಿರುವರು. ಈ ಹಿನ್ನೆಲೆಯಲ್ಲಿ ೨೧ನೇ ಶತಮಾನದ ಮೊದಲ ಭಾಗದಲ್ಲಿ ಪ್ರಕಟವಾಗಿರುವ, ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯನ್ನು ಪ್ರಸ್ತುತ ಪ್ರಬಂಧದಲ್ಲಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ.

ಶ್ರೀನಿವಾಸ ವೈದ್ಯ ಅವರು ಹಿಂದಿನಿಂದಲೂ ಕನ್ನಡದ ಪ್ರಸಿದ್ಧ ಲೇಖಕರೇನಲ್ಲ. ಅವರು ಹಾಸ್ಯಲೇಖನಗಳನ್ನು ಬರೆಯುತ್ತಿದ್ದವರು. ಆದರೆ ಅವರನ್ನು ತಮ್ಮ ಇಳಿ ವಯಸ್ಸಿನಲ್ಲಿ

ಕಾದಂಬರಿ ಕ್ಷೇತ್ರಕ್ಕೆ ಪ್ರವೇಶಿಸಿ 'ಹಳ್ಳ ಬಂತು ಹಳ್ಳ' ಎಂಬ ಚೊಚ್ಚಲ ಕಾದಂಬರಿಯನ್ನು ಬರೆದರು. ಅದು ಅವರಿಗೆ ಕನ್ನಡ ಸಾಹಿತ್ಯದಲ್ಲಿ ದೊಡ್ಡ ಸ್ಥಾನವನ್ನು ದೊರಕಿಸಿಕೊಟ್ಟಿತು. ಶ್ರೀಯುತರು ಧಾರವಾಡದಲ್ಲಿ ಹುಟ್ಟಿಬೆಳೆದವರು. ಅಲ್ಲಿಯೇ ಅವರ ಉನ್ನತ ಶಿಕ್ಷಣವು ಮುಗಿಯಿತು. ಮುಂದೆ ಅವರು ಬ್ಯಾಂಕ್ ಅಧಿಕಾರಿಯಾಗಿ ಮುಂಬೈನಲ್ಲಿ ಬಹುಕಾಲ ಕೆಲಸ ಮಾಡಿದರು. ಈಗ ಅವರು ಬೆಂಗಳೂರಿನಲ್ಲಿ ವಾಸವಾಗಿದ್ದಾರೆ.

'ಹಳ್ಳಬಂತು ಹಳ್ಳ' ಕಾದಂಬರಿಯು,ಆಗಸ್ಟ್ ೨೦೦೪ರಲ್ಲಿ ಪ್ರಕಟವಾಯಿತು. ಇದು 'ಗ್ರಾಮಾಯಣ', 'ಮಲೆಗಳಲ್ಲಿ ಮದುಮಗಳು', 'ಮರಳಿ ಮಣ್ಣಿಗೆ' 'ನಿಸರ್ಗ' ಮುಂತಾದ ಕಾದಂಬರಿಗಳ ಹಾಗೆ ಒಂದು ಸಮುದಾಯದ ಹಲವಾರು ತಲೆಮಾರುಗಳ ಕಥನವನ್ನು ಹಿಡಿದುಕೊಡುವ ಎಪಿಕ್ ಮಾದರಿಯ ಕಾದಂಬರಿಯಾಗಿದೆ. 'ಹಳ್ಳ ಬಂತು ಹಳ್ಳ'ವು ಈಗಿನ ಧಾರವಾಡ ಜಿಲ್ಲೆಯ ನರಗುಂದ ಸೀಮೆಯ ಜೀವನ ವಿಧಾನವನ್ನು ಒಳಗೊಂಡಿದೆ; ಇದು ಮುಖ್ಯವಾಗಿ ಒಂದು ಬ್ರಾಹ್ಮಣ ಕುಟುಂಬದ ಸುತ್ತ ರೂಪುಗೊಂಡ ಕಥನವಾಗಿದೆ. ಇದು ಈ ಕುಟುಂಬ ಜತೆಗೆ ಆ ಸೀಮೆಯ ಒಟ್ಟು ಜನರ ಜೀವನ ಪದ್ಧತಿ, ಅವರ ಭಾಷೆ, ಅಲ್ಲಿನ ಇತಿಹಾಸ, ಹೋರಾಟ, ಸಾಮಾಜಿಕ ರಾಜಕೀಯ ವಿದ್ಯಮಾನ, ನಂಬಿಕೆ, ಕಲೆ, ಆಚರಣೆ ಇವೇ ಮುಂತಾದ ಆಯಾಮಗಳನ್ನು ಒಳಗೊಂಡಿದೆ. ಈ ಕಾರಣದಿಂದ ಇದು ಕನ್ನಡ ಕಾದಂಬರಿ ಸಾಹಿತ್ಯ ಲೋಕದಲ್ಲಿಯೇ ವಿಶಿಷ್ಟ ಸ್ಥಾನ ಪಡೆದು ಕೊಳ್ಳಬಲ್ಲ ಮಹತ್ವವನ್ನು ಪಡೆದಿದೆ.

ಕಾದಂಬರಿಯು ಪ್ರಮುಖವಾಗಿ ೮ ಅಧ್ಯಾಯಗಳನ್ನು ಒಳಗೊಂಡಿದೆ. ಕಾದಂಬರಿಯಲ್ಲಿ ಕಂಡು ಬರುವ ಒಂದೊಂದು ಅಧ್ಯಾಯವು ಸಹ ಒಂದೊಂದು ಅನುಭವದ ಜಗತ್ತನ್ನು ತೆರೆಯುವಂತ್ತಿದೆ. ಈ ಕಾದಂಬರಿಯು ಧಾರವಾಡ ಸೀಮೆಯ ನವಲುಗುಂದ ಭಾಗದ ಬ್ರಾಹ್ಮಣರ ಕುಟುಂಬದ ನೋವು ನಲಿವುಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಉತ್ತರ ಭಾರತದಿಂದ ನರಗುಂದ ಸಂಸ್ಥಾನಕ್ಕೆ ಯಾವುದೊ ಸಂದೇಶವನ್ನು ತೆಗೆದುಕೊಂಡು ಇಬ್ಬರು ಕುದುರೆ ಸವಾರರು ದಕ್ಷಿಣಕ್ಕೆ ಬರುತ್ತಾರೆ. ಅವರನ್ನು ನವಲಗುಂದದ ದೇಸಾಯಿಯ ಕಡೆಯವರು ಸೆರೆಹಿಡಿಯುತ್ತಾರೆ. ಅವರಲ್ಲಿ ಒಬ್ಬ ಅಲ್ಲಿಯೇ ಉಳಿದುಕೊಂಡು ಅಲ್ಲಿಯೆ ಲಗ್ನವಾಗಿ, ಅಲ್ಲಿನ ಸ್ಥಳೀಯ ಪರಿಸರಕ್ಕೆ ಹೊಂದಿಕೊಂಡು ಜೀವನ ಮಾಡುತ್ತಾನೆ. ಅವನ ಮಕ್ಕಳು ಮೊಮ್ಮಕ್ಕಳ ಕಥೆಯನ್ನು ಪ್ರಸ್ತುತ ಕಾದಂಬರಿಯು ಒಳಗೊಂಡಿದೆ.

ವೈದ್ಯರ ಕಾದಂಬರಿಯ ಮಹತ್ವವೇನೆಂದರೆ, ನವಲಗುಂದ ಪರಿಸರದ ಗ್ರಾಮೀಣ ಆಡುಭಾಷೆಯನ್ನು ಕಾದಂಬರಿಯಲ್ಲಿ ಸೂರೆಹೊಡೆದಿರುವುದು. ಅವರು ಬ್ರಾಹ್ಮಣರ

ಸಾಂಪ್ರದಾಯಕ ಜೀವವನ್ನು ದಾಖಲಿಸುತ್ತಲೇ ಅದರ ಒಳಗೆ ಪ್ರವೇಶ ಪಡೆಯುವ ಆಧುನಿಕತೆ ಮತ್ತು ಮುಕ್ತ ವಿಚಾರಗಳು ಮಾಡುವ ಸಾಮಾಜಿಕ ಸಾಂಸ್ಕೃತಿಕ ಪಲ್ಲಟಗಳನ್ನು ಗುರುತಿಸಿದ್ದಾರೆ. ಶೋಷಕರು ಎಂದು ಸಾಮಾನ್ಯವಾಗಿ ಭಾವಿಸುವ ಬ್ರಾಹ್ಮಣರ ಕುಟುಂಬವೊಂದರ ಶೋಚನೀಯ ಬದುಕನ್ನು ಎಳೆ ಎಳೆಯಾಗಿ ಕಾದಂಬರಿ ಬಿಚ್ಚಿಕೊಡುತ್ತದೆ.

ಪ್ರಸ್ತುತ 'ಹಳ್ಳ ಬಂತು ಹಳ್ಳ' ಕಾದಂಬರಿಯು ಬ್ರಾಹ್ಮಣ ಜೀವನವನ್ನು ಎಲ್ಲ ಸಾಮಾನ್ಯರ ಹಾಗೆ ಎಂಬಂತೆ ಚಿತ್ರಿಸುತ್ತದೆ. ಅವರು ಎಲ್ಲರಂತೆ ಪಡುವ ಪಾಡನ್ನು ಕಾಣಿಸುತ್ತದೆ. ಈ ಮೂಲಕ ಗ್ರಾಮೀಣ ಬ್ರಾಹ್ಮಣರ ಬಗ್ಗೆ ಕನ್ನಡದಲ್ಲಿ ಸಾಮಾನ್ಯವಾಗಿ ಇರುವ ಪೂರ್ವಗ್ರಹಗಳನ್ನು ಒಡೆದು ಹಾಕುತ್ತದೆ. ಈ ಕಾದಂಬರಿಯಲ್ಲಿ ಬೇರೆಬೇರೆ ಸಮುದಾಯಗಳು ಒಂದು ಊರಿನಲ್ಲಿ ಸಂಘರ್ಷ ಮತ್ತು ಸಮನ್ವಯದಲ್ಲಿ ಬದುಕುವ ಪರಿಯನ್ನು ಕಾಣಬಹುದು. ಅದರಲ್ಲೂ ವಿವಿಧ ಸಮುದಾಯಗಳ ನಡುವೆ ಇರುವ ಸಹಕಾರ ಮತ್ತು ಸಮನ್ವಯ ಮನೋಧರ್ಮವನ್ನು ಅದು ತೋರುತ್ತದೆ. ಇದು ಸಾಮಾಜಿಕ ಜೀವನದ ಜತೆಯಲ್ಲಿಯೆ ರಾಜಕೀಯ ಜೀವನವನ್ನು ಕೂಡ ಹಿಡಿದುಕೊಡುತ್ತದೆ. ಬ್ರಿಟಿಶರ ವಿರುದ್ಧ ಭಾರತೀಯರ ಸ್ವಾತಂತ್ರ್ಯ ಹೋರಾಟವನ್ನು ಚಿತ್ರಿಸುತ್ತದೆ. ಹಿಂದೂ ಮತ್ತು ಮುಸ್ಲಿಂ ಸಮುದಾಯಗಳು ಒಟ್ಟಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದನ್ನು ಅದು ಚಿತ್ರಿಸುತ್ತದೆ. ಈ ಕಾದಂಬರಿಯು ಮಾಧ್ವ ಬ್ರಾಹ್ಮಣರ ಸಂಪ್ರದಾಯ ಮತ್ತು ಆಚರಣೆಗಳನ್ನು ಚಿತ್ರಿಸುತ್ತದೆ. ಅವು ಬದಲಾದ ಕಾಲಘಟ್ಟದಲ್ಲಿ ಅವು ತಾವೂ ಬದಲಾವಣೆಗೆ ಒಳಗಾಗುವುದನ್ನು ಚಿತ್ರಿಸುತ್ತದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಇದು ಕನ್ನಡದ ಮಹತ್ವದ ಕಾದಂಬರಿಗಳಲ್ಲಿ ಒಂದಾಗಿದೆ. ಈ ಕಾರಣದಿಂದ ಈ ಕಾದಂಬರಿಯನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ.

**೧.೨. ಉದ್ದೇಶ ಮತ್ತು ಮಹತ್ವ**

ಈ ಕಾದಂಬರಿಯನ್ನು ಅಧ್ಯಯನ ಮಾಡುವ ಮೂಲಕ, ಕನ್ನಡದ ಕಾದಂಬರಿ ಪರಂಪರೆಯನ್ನು ಅರಿಯುವುದು ಇಲ್ಲಿನ ಉದ್ದೇಶವಾಗಿದೆ. ಒಬ್ಬ ಲೇಖಕ ತನ್ನ ಮೊದಲ ಯತ್ನದಲ್ಲಿಯೇ ಇಂತಹದೊಂದು ಕಾದಂಬರಿ ರಚಿಸಿರುವುದು ಮತ್ತು ಯಶಸ್ವಿಯಾಗಿರುವುದನ್ನು ಇಲ್ಲಿ ಗಮನಿಸಲಾಗುವುದು. ಪ್ರಾದೇಶಿಕ ಭಾಷೆಯನ್ನು ಬಳಸಿ ಒಂದು ಕಾದಂಬರಿಯು ತನ್ನಪರಿಸರದ ಜೀವನವನ್ನು ಹೇಗೆ ಸಮರ್ಥವಾಗಿ ಕಟ್ಟಿಕೊಡಬಲ್ಲದು ಎಂಬುದನ್ನು ನೋಡುವುದು ಇಲ್ಲಿನ ಉದ್ದೇಶವಾಗಿದೆ. ಒಂದು ಕುಟುಂಬದ ಕಥೆಯನ್ನು ಹೇಳುವ ನೆಪದಲ್ಲಿ ಒಂದು ಕಾದಂಬರಿಯು ಹೇಗೆ ಒಂದು ಇಡೀ ಊರಿನ ಕತೆಯಾಗಿ ವಿಸ್ತರಣೆ ಪಡೆಯುತ್ತದೆ ಎಂಬುದನ್ನು ಇಲ್ಲಿ ಅಧ್ಯಯನ ಮಾಡುವುದು

ಮುಖ್ಯವಾಗಿದೆ. ಒಬ್ಬ ಲೇಖಕ ಒಂದು ಒಬ್ಬ ವ್ಯಕ್ತಿಯ ಒಂದು ಕುಟುಂಬದ ಹಾಗೂ ಒಂದು ಊರಿನ ಕಥೆಯನ್ನು ಹೇಳುತ್ತಲೇ ಒಂದು ಸಾಮಾಜಿಕ ರಾಜಕೀಯ ಚರಿತ್ರೆಯನ್ನು ಕಟ್ಟಿಕೊಡುವುದನ್ನು ನೋಡುವುದು ಇಲ್ಲಿನ ಉದ್ದೇಶವಾಗಿದೆ. ಒಂದು ಕಾದಂಬರಿಯು ಹೇಗೆ ಒಂದು ಜೀವನದ ಅರ್ಥವನ್ನು ಶೋಧಿಸುತ್ತ ದಾರ್ಶನಿಕವಾಗಿ ಆಳವನ್ನು ಪಡೆಯುತ್ತದೆ ಎಂಬುದನ್ನು ನೋಡುವುದು ಇಲ್ಲಿನ ಉದ್ದೇಶವಾಗಿದೆ.

### ೧.೧. ಅಧ್ಯಯನ ವಿಧಾನ

ಹೊಸಗನ್ನಡ ಸಾಹಿತ್ಯದ ಪ್ರಕಾರಗಳಲ್ಲಿಯೇ ಅತ್ಯಂತ ವಿಪುಲವಾಗಿ ಬೆಳೆದ ಸಾಹಿತ್ಯ ಪ್ರಕಾರವೆಂದರೆ ಕಾದಂಬರಿ ಸಾಹಿತ್ಯ. ಈ ಕಾದಂಬರಿಯು ಒಂದು ಸಮಾಜದ ಒಂದು ಪ್ರದೇಶದ ಜನರ ನೋವು, ನಲಿವು,ಜೀವನ ವಿಧಾನ, ದೌರ್ಜನ್ಯ ಇವೇ ಮುಂತಾದ ಅಂಶಗಳನ್ನು ಎಳೆ ಎಳೆಯಾಗಿ ಬಿಡಿಸಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಆದ್ದರಿಂದ ಈ ಸಾಹಿತ್ಯ ಪ್ರಕಾರವು ವಿವಿಧ ಸಾಹಿತ್ಯ ಪ್ರಕಾರಗಳಿಂದ ವಿಭಿನ್ನವಾದ ಮಹತ್ವವಾದ ಸಾಹಿತ್ಯ ಪ್ರಕಾರವಾಗಿ ಕನ್ನಡ ಸಾಹಿತ್ಯದಲ್ಲಿ ಬೆಳೆದು ಬಂದಿದೆ.

ಪ್ರಸ್ತುತ ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯನ್ನು ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಹಿತ್ಯಿಕ ನೆಲೆಗಳಿಂದ ವಿಶ್ಲೇಷಣೆ ಮಾಡಲು ಈ ಅಧ್ಯಯನದಲ್ಲಿ ಯತ್ನಿಸಲಾಗಿದೆ. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯ ಈ ಅಧ್ಯಯನವನ್ನು ಆರು ಅಧ್ಯಾಯಗಳಾಗಿ ವಿಂಗಡಿಸಿ ವಿಶ್ಲೇಷಿಸಲಾಗಿದೆ. ಒಂದನೇ ಅಧ್ಯಾಯದಲ್ಲಿ ಉದ್ದೇಶ ಮತ್ತು ವ್ಯಾಪ್ತಿ, ಮಹತ್ವ, ಅಧ್ಯಯನದ ವಿಧಾನ ಮತ್ತು ಅಧ್ಯಯನಗಳ ಸಮೀಕ್ಷೆ ಕುರಿತು ವಿಶ್ಲೇಷಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಸಾಮಾಜಿಕ ವಿಶ್ಲೇಷಣೆ ಎಂಬ ಶೀರ್ಷಿಕೆಯಡಿಯಲ್ಲಿ ಜಾತಿ, ವರ್ಗ, ವರ್ಣ, ಲಿಂಗಬೇದ, ವಿವಾಹ ಮತ್ತು ಕುಟುಂಬ ಪದ್ಧತಿಯ ಬಗ್ಗೆ ಚರ್ಚಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ರಾಜಕೀಯ ವಿಶ್ಲೇಷಣೆ ಎಂಬ ಶೀರ್ಷಿಕೆಯಡಿಯಲ್ಲಿ ನರಗುಂದದ ದೊರೆಗಳ ಆಡಳಿತ, ಬ್ರಿಟಿಷರ ಆಳ್ವಿಕೆ ಹಾಗೂ ಅವರ ವಿರುದ್ಧ ಏಳುವ ಸ್ವಾತಂತ್ರ್ಯ ಚಳುವಳಿಯ ಸ್ವರೂಪವನ್ನು ವಿಶ್ಲೇಷಿಸಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಕಾದಂಬರಿಯ ಸಾಹಿತ್ಯಕ ವಿಶ್ಲೇಷಣೆಯನ್ನು ಕೊಡಲಾಗಿದೆ. ಐದನೇ ಅಧ್ಯಾಯದಲ್ಲಿ ಕಾದಂಬರಿಯ ಧಾರ್ಮಿಕ ಮತ್ತು ದಾರ್ಶನಿಕ ವಿಶ್ಲೇಷಣೆಯನ್ನು ಮಾಡಲಾಗಿದೆ. ಕೊನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಿತ ಮತ್ತು ಹೆಚ್ಚಿನ ಅಧ್ಯಯನದ ಸಾಧ್ಯತೆಗಳನ್ನು ಕುರಿತು ಚರ್ಚಿಸಲಾಗಿದೆ.

# ಅಧ್ಯಾಯ–೨. ಸಾಮಾಜಿಕ ವಿಶ್ಲೇಷಣೆ

೨.೧– ಜಾತಿ

೨.೨– ವರ್ಗ

೨.೩–ಲಿಂಗಬೇಧ

೨.೪– ವಿವಾಹ ಮತ್ತು ಕುಟುಂಬ

# ಅಧ್ಯಾಯ -೨

## ಕಾದಂಬರಿ ಸಾಮಾಜಿಕ

## ವಿಶ್ಲೇಷಣೆ

ನಮ್ಮ ವಾಸ್ತವವಾದಿ ಕಾದಂಬರಿಗಳು ನಮ್ಮ ಸಮಾಜದ ಪರೋಕ್ಷ ಚಿತ್ರಗಳಾಗಿವೆ. ಇವು ಜಾತಿ, ಧರ್ಮ, ಲಿಂಗಭೇದ ಇತ್ಯಾದಿ ಸಮಾಜದ ಸಂಗತಿಗಳನ್ನು ಕುರಿತು ತಮ್ಮದೇ ಆದ ಚಿತ್ರಗಳನ್ನು ಕೊಡುತ್ತವೆ. ಆ ಚಿತ್ರಗಳನ್ನು ಪರಿಶೀಲಿಸುವುದು ಕಾದಂಬರಿ ಅಧ್ಯಯನದಲ್ಲಿ ಮುಖ್ಯವಾಗಿರುತ್ತದೆ. ಪ್ರಸ್ತುತ ಕಾದಂಬರಿ 'ಹಳ್ಳಬಂತು ಹಳ್ಳ'ದಲ್ಲಿ ಈ ಸಂಗತಿಗಳು ಹೇಗೆ ಚಿತ್ರಣಗೊಂಡಿವೆ ಎಂಬುದನ್ನು ನೋಡುವುದು ಈ ಅಧ್ಯಾಯದ ಉದ್ದೇಶವಾಗಿದೆ.

### ೨.೧ 'ಹಳ್ಳ ಬಂತು ಹಳ್ಳ' ಕಾದಂಬರಿ ಮತ್ತು ಜಾತಿಯ ಸಮಸ್ಯೆ

ಕನ್ನಡದ ಬಹುತೇಕ ಕಾದಂಬರಿಗಳಲ್ಲಿ ಗ್ರಾಮದ ಚಿತ್ರಣವನ್ನು ಕಾಣಬಹುದು. ನಮ್ಮ ಗ್ರಾಮ ಸಮಾಜವು ಜಾತಿ ಉಪಜಾತಿಗಳಿಂದು ಕೂಡಿದೆ. ಜಾತಿ ಉಪಜಾತಿಗಳು ತಮ್ಮದೇ ಆದ ಕುಲ ಕಸುಬು ಹಾಗೂ ಆಚರಣೆಗಳನ್ನು ರೂಢಿಸಿಕೊಂಡಿವೆ. ಹೀಗಾಗಿ ಕಾದಂಬರಿಗಳು ಉದ್ದಕ್ಕೂ ನಮ್ಮ ಸಮಾಜದ ಬಹಳ ಮುಖ್ಯ ಸಂಗತಿಯಾದ ಜಾತಿಯ ವ್ಯವಸ್ಥೆಯನ್ನು ಚಿತ್ರಿಸುತ್ತ ಬಂದಿವೆ. ***'ಚೋಮನದುಡಿ' 'ಒಡಲಾಳ'*** **ಮತ್ತು** ***'ಮಲೆಗಳಲ್ಲಿ ಮದುಮಗಳು'*** ಕಾದಂಬರಿಗಳು ಈ ಸಂಘರ್ಷಗಳನ್ನು ಮುಕ್ತವಾಗಿ ತಾತ್ವಿಕವಾಗಿ ಚರ್ಚಿಸುತ್ತವೆ. ಇವು ಹಿಂಸೆಯನ್ನು ಮನುಷ್ಯ ವಿರೋಧಿ ನಿಲುವುಗಳಾಗಿ ಪರಿಗಣಿಸುತ್ತವೆ.

'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಹಳೆಯ ಧಾರವಾಡ' ಜಿಲ್ಲೆಗೆ ಸೇರಿದ ನರಗುಂದ, ನವಲುಗುಂದ, ಯಮನೂರು, ಮೊರಬ, ಚಿಲಕವಾಡಿ, ಇನ್ನು ಮುಂತಾದ ಗ್ರಾಮಗಳ ಬದುಕಿನ ಚಿತ್ರಣವಿದೆ. ಈ ಗ್ರಾಮಗಳಲ್ಲಿ ಜಾತಿ ವ್ಯವಸ್ಥೆ ತನ್ನದೇ ಅದ ರೀತಿಯಲ್ಲಿ ಅಸ್ತಿತ್ವದಲ್ಲಿದ್ದು, ಅದನ್ನು ಕೃತಿಯು ಹಿಡಿದುಕೊಡುತ್ತದೆ.

ಸಮಾಜದಲ್ಲಿ ಮೇಲು ಮತ್ತು ಕೆಳಜಾತಿಗಳ ನಡುವೆ ಅನೇಕ ಬಗೆಯ ಸಂಘರ್ಷಗಳು ನಡೆಯುತ್ತಿರುತ್ತವೆ. ಅವುಗಳಲ್ಲಿ ಒಂದು ಬಗೆಯ ಸಾಮರಸ್ಯ ಕೂಡ ಇದೆ. ಈ ಸಂಘರ್ಷ ಸಾಮರಸ್ಯಗಳು ಶತಮಾನಗಳಿಂದ ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿವೆ'. 'ಹಳ್ಳಬಂತು ಹಳ್ಳ'ದಲ್ಲಿ ಮುಖ್ಯವಾಗಿ ಬ್ರಾಹ್ಮಣ ಸಮುದಾಯದ ಕತೆಯಿದೆ. ಇದರ ಜತೆಗೆ ಅವರ ಜತೆ ಬದುಕುತ್ತಿರುವ ಲಿಂಗಾಯಿತರು, ಕೌರಿಕರು, ಮುಸ್ಲಿಮರು ಮತ್ತಿತರ ಜಾತಿಗಳ' ಜೀವನ ಕ್ರಮವೂ ಇದೆ. ಈ ಜಾತಿ ಜಾತಿಗಳ ನಡುವೆ ಸಹಕಾರ ಮತ್ತು ಸಾಂಘಿಕ ಮನೋಭಾವನೆಯನ್ನು ಸ್ವಲ್ಪ ಮಟ್ಟಿಗೆ ಕಾಣಬಹುದಾಗಿದೆ. ಜಾತಿ ಉಪಜಾತಿಗಳಿಗೆ ಹುಟ್ಟು,

ಸಾವು, ಮದುವೆ, ಪೂಜೆ ಇತ್ಯಾದಿಗಳ ವಿಷಯದಲ್ಲಿ ಅವುಗಳದ್ದೇ ಆದ ವಿಧಿ ವಿಧಾನಗಳಿವೆ. ಆಚರಣೆಗಳಿವೆ. ಕಾದಂಬರಿ ಅವುಗಳಲ್ಲಿ ಬ್ರಾಹ್ಮಣ ಸಮುದಾಯದ ಜಾತಿ ಆಚರಣೆಗಳನ್ನು ಹೆಚ್ಚಾಗಿ ಹಿಡಿದುಕೊಡುತ್ತದೆ.

'ಹಳ್ಳ ಬಂತು ಹಳ್ಳ' ಕಾದಂಬರಿಯು ಜಾತಿ ತಾರತಮ್ಯಗಳನ್ನು ಬಹಳ ಖಚಿತವಾಗಿ ಚಿತ್ರಿಸುತ್ತದೆ. ಬ್ರಾಹ್ಮಣರ ಮನೆಯಲ್ಲಿ ಬೆಳೆದ ನಾರಾಯಣನ ಜಾತಿಯು ತಿಳಿದ ಮೇಲೆ, ಅವನ ಜತೆಗೆ ಮನೆಯವರ ಸಂಬಂಧವು ಬದಲಾಗುವುದನ್ನು ಅದು ಚಿತ್ರಿಸುತ್ತದೆ. ಅವನನ್ನು ಅಂಬಕ್ಕ ಹೊರಗೆ ಕೂರಿಸಿ ಊಟಹಾಕುತ್ತಾಳೆ. ಅವನ ಜತೆ ಅದುವರೆಗೂ ಮನೆಯವರು ಇಟ್ಟುಕೊಂಡಿದ್ದ ಮನುಷ್ಯ ಸಂಬಂಧಗಳೇ ಬದಲಾಗುತ್ತವೆ. ಇದು ಜಾತಿಯ ಹಿಡಿತವನ್ನು ಸೂಚಿಸುತ್ತದೆ. ಕಾದಂಬರಿ ಮಾನವ ಸಂಬಂಧಗಳನ್ನು ನಿಯಂತ್ರಿಸುವ ಶಕ್ತಿ ಜಾತಿಗೆ ಇರುವುದನ್ನು ಕಠೋರವಾಗಿ ಚಿತ್ರಿಸುತ್ತದೆ.

ಕಾದಂಬರಿಯ ವಿಶೇಷ ಎಂದರೆ ಇಂತಹ ಜಾತಿ ಮನೋಧರ್ಮದ ವಿರುದ್ಧ ಹೋರಾಟ ನಡೆಯುವುದನ್ನು ಕೂಡ ಚಿತ್ರಿಸುವುದು. ನಾರಾಯಣನು ಸ್ವತಃಮನೆಯಿಂದ ಹೊರಗೆ ಹೋಗುತ್ತಾನೆ. ಅಂತರಜಾತಿ ಮದುವೆ ಆಗುತ್ತಾನೆ. ಸ್ವತಂತ್ರವಾದ ಬದುಕನ್ನು ಬದುಕುತ್ತಾನೆ. ಅವನ ಧೀಮಂತ ಬದುಕನ್ನು ಕಾದಂಬರಿಯು ಆದರದಿಂದ ಚಿತ್ರಿಸುತ್ತದೆ. ಇರುವುದೊಂದೆ ಜಾತಿ ಅದು ಮನುಷ್ಯ ಜಾತಿ ಎಂಬ ನಿಲುವಿಗೆ ಹೋರಾಡುವ ವ್ಯಕ್ತಿ ನಾರಾಯಣ. ಇವನು ಎಲ್ಲಾ ಜಾತಿಗಳಲ್ಲಿ ಬೆಳೆಯುತ್ತಾ ಎಲ್ಲಾ ಜಾತಿಗಳ ಆಚರಣೆಗಳನ್ನು ಮೈಗುಡಿಸಿಕೊಳ್ಳುತ್ತಾ ಬೆಳೆದು ಮನುಷ್ಯತ್ವಕ್ಕೆ ಹೆಚ್ಚಿನ ಆದ್ಯತೆ ನೀಡುವವನು. ಈತ ಜಾತಿವ್ಯವಸ್ಥೆಯ ವಿರೋಧಿಯಾಗಿ ಕಾದಂಬರಿಯಲ್ಲಿ ಚಿತ್ರಿತನಾಗಿದ್ದಾನೆ. ಮೂರನೆಯ ತಲೆಮಾರಿನಲ್ಲಿ ವಾಸಣ್ಣನ ಕುಟುಂಬದ ಅನೇಕ ಸದಸ್ಯರು ಜಾತಿಯನ್ನು ತೊರೆದು ತಮ್ಮ ಸಂಬಂಧವನ್ನು ಬೆಳೆಸುವುದನ್ನು ಕಾದಂಬರಿ ಚಿತ್ರಿಸುತ್ತದೆ. ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕುವ ಜನರು ಕೂಡ ತಮ್ಮ ಜಾತಿಯ ಆಚರಣೆಗಳನ್ನು ಬಿಟ್ಟುಬಿಡುತ್ತಾರೆ. ಹೀಗೆ ನಗರೀಕರಣ, ಆಧುನಿಕ ವಿದ್ಯಾಭ್ಯಾಸ, ಹಾಗೂ ಸಾರ್ವಜನಿಕ ಹೋರಾಟಗಳು ಜಾತಿಯನ್ನು ಮುರಿಯುವ ಶಕ್ತಿಗಳಾಗುವುದನ್ನು ಕಾದಂಬರಿ ಶ್ರದ್ಧೆಯಿಂದ ಚಿತ್ರಿಸುತ್ತದೆ.

ನಮ್ಮ ಸಮಾಜದಲ್ಲಿ ಜಾತಿ ವ್ಯವಸ್ಥೆಯ ಬಿಗಿಯಾದ ಹಿಡಿತವಿದೆ. ಇದನ್ನು ಹಿಂದಿನ ತಲೆಮಾರಿನ ಜನರಲ್ಲಿ ಹೆಚ್ಚಾಗಿ ಕಾಣುತ್ತೇವೆ. ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಜಾತಿ ಪರಿಕಲ್ಪನೆಯು ಸಡಿಲಿಕೆಯಾಗುತ್ತದೆ ಎಂದು ಸಾಮಾನ್ಯವಾಗಿ ನಂಬಲಾಗಿದೆ. ಇದು ನಿಜ ಕೂಡ. ಈ ಕಾದಂಬರಿಯಲ್ಲಿ ಹೊಸತಲೆಮಾರಿನ ತರುಣರು ಜಾತಿಯನ್ನು ಕುರಿತು ತಮ್ಮ

ಹಿರಿಯರು ಇಟ್ಟುಕೊಂಡಿದ್ದ ಜಡನಂಬಿಕೆಯನ್ನು ಬಿಟ್ಟುಕೊಡುತ್ತಾರೆ. ಆದರೆ ಈ ಕಾದಂಬರಿಯ ಹಿರಿಯರು ಈ ಜಡತೆಯನ್ನು ಬಿಟ್ಟುಕೊಡುವುದಿಲ್ಲ. ಇದಕ್ಕೆ ಸಾಕ್ಷಿ ಕಾದಂಬರಿಯಲ್ಲಿ ಅಂಬಕ್ಕ ಎನ್ನುವ ಬ್ರಾಹ್ಮಣ ವಿಧವೆ ಮತ್ತು ಮುದುಕಿ. ಈಕೆಯು ಅನಾಥಳಾಗಿ ಎಲ್ಲಿಂದಲೋ ಬಂದ ಮರಾಠರ ರುಕುಮಾಳನ್ನು ಮನೆಯ ಒಳಗೆ ಸೇರಿಸಿಕೊಂಡರೂ, ಅವಳನ್ನು ತಾತ್ಸಾರ ಮನೋಭಾವನೆಯಿಂದ ಕಾಣುತ್ತಾಳೆ. ಆಕೆ ಕಾದಂಬರಿ ಉದ್ದಕ್ಕೂ ಮಡಿಮಡಿ ಎಂದು ಅಸ್ಪೃಶ್ಯತೆ ಆಚರಿಸುತ್ತಾಳೆ. ಅವಳು ಜಾತಿಯ ವಿಷಯದಲ್ಲಿ ಸಂಪ್ರದಾಯವಾದಿ ಆಗಿರುವಳು. ಈ ಕಾರಣದಿಂದಲೇ ಮಾನವ ಸಂಬಂಧ ವಿಷಯಗಳಲ್ಲಿ ಆಕೆ ಕೆಲವೊಮ್ಮೆ ಕ್ರೂರಿಯೂ ಆಗಿರುವುದನ್ನು ಕಾಣುತ್ತೇವೆ. ಈ ಕ್ರೌರ್ಯವನ್ನು ಕಾದಂಬರಿಯು ಬಹಳ ನಿಷ್ಠುರವಾಗಿ ಹಿಡಿದುಕೊಡುತ್ತವೆ. ಓದುಗರಿಗೆ ಈ ಮಡಿವಂತಿಕೆಯ ಹಿನ್ನೆಲೆಯಲ್ಲಿರುವ ಕ್ರೌರ್ಯದ ಬಗ್ಗೆ ಅಸಮ್ಮತಿಯನ್ನು ತಾಳುವಂತೆ ಕಾದಂಬರಿಯ ಶೈಲಿಯಿದೆ.

ಆದರೂ ಈ ಬಗೆಯ ಜಾತಿಯ ಕಟ್ಟುಪಾಡುಗಳ ಆಚೆ ಜೀವನ ಪ್ರವಾಹವು ತನ್ನದೇ ಆದ ಗತಿಯಲ್ಲಿ ಹರಿಯುವುದನ್ನು ಕಾದಂಬರಿ ಸಂಭ್ರಮದಿಂದ ಚಿತ್ರಿಸುತ್ತದೆ. ನಮ್ಮ ಸಮಾಜದಲ್ಲಿ ವಿವಾಹವು ಜಾತಿ ಜಾತಿಗಳ ನಡುವೆ ನಡೆಯುತ್ತದೆ; ತಿಪ್ಪಕ್ಕ ಅಪ್ಪಟ ಜಾತಿ ನಿಷ್ಠಳಾಗಿದ್ದು, ತನ್ನ ಮಗಳಾದ ಚಂಪಿಯನ್ನು ನಾರಾಯಣನಿಗೆ ಕೊಡಲು ನಿರಾಕರಿಸುತ್ತಾಳೆ. ನಾರಾಯಣನು ಶುದ್ಧ ಬ್ರಾಹ್ಮಣ ತಂದೆಗೆ ಹುಟ್ಟಿದವನಲ್ಲ ಎಂಬುದು ಅವಳ ಅಭಿಪ್ರಾಯ. ಬದಲಿಗೆ ಚಂಪಿಯನ್ನು ವೆಂಕಣ್ಣನ ಎರಡನೇ ಮಗ ಹಣಮ್ಯಾನಿಗೆ ಕೊಟ್ಟು ವಿವಾಹ ಮಾಡಿಸುತ್ತಾಳೆ. ತಿಪ್ಪಕ್ಕ ಇಲ್ಲಿ ಜಾತಿ ತಾರತಮ್ಯ ಮಾಡುವುದು ಕಂಡು ಬರುತ್ತದೆ. ಮಾನವೀಯ ಸಂಬಂಧಕ್ಕಿಂತ ಜಾತಿಯೇ ಶ್ರೇಷ್ಠ ಎಂದು ಭಾವಿಸುತ್ತಾಳೆ. ಆದರೆ ಜಾತಿಯೊಳಗೆ ಆಗುವ ಮದುವೆಗಳಲ್ಲಿ ಅನೇಕ ಮದುವೆಗಳು ದುರಂತದಲ್ಲಿ ಮುಗಿಯುವದನ್ನು ಕಾದಂಬರಿ ಚಿತ್ರಿಸುತ್ತದೆ. ಸೋನಿಯನ್ನು ಅವಳ ಗಂಡನ ಕಡೆಯವರು ಹಣದಾಸೆಗಾಗಿ ಕೊಲ್ಲುವುದನ್ನು ಕಾದಂಬರಿ ಕಾಣಿಸುತ್ತದೆ. ಆದರೆ ಪ್ರೇಮಿಸಿ ಜಾತಿಯ ಆಚೆ ಲಗ್ನವಾದ ನಾರಾಯಣನು ಒಳ್ಳೆಯ ಬದುಕನ್ನು ಬದುಕುವುದನ್ನು ಕಾದಂಬರಿ ಕಾಣಿಸುತ್ತದೆ. ಜೀವನದ ಇಕ್ಕಟ್ಟಿನ ಸಂದರ್ಭಗಳು ಸಹ ಜಾತಿಯ ಕಟ್ಟುಪಾಡನ್ನು ಮುರಿಯುವದಕ್ಕೆ ಪ್ರೇರಣೆ ನೀಡುತ್ತವೆ. ಇದನ್ನು ಕಾದಂಬರಿಯ ಆರಂಭದಲ್ಲೇ ಕಾಣಬಹುದು. ಯಾವುದೊ ದೇಶದಿಂದ ಅಪರಿಚಿತನಾಗಿ ಬರುವ ಕಮಲಯ್ಯನನ್ನು ಬಡಬ್ರಾಹ್ಮಣನಾದ ಯಂಕಣ್ಣನು ತನ್ನ ಅಳಿಯನ್ನಾಗಿ ಸ್ವೀಕರಿಸುತ್ತಾನೆ. ಉತ್ತರ ಭಾರತದಿಂದ ಬಂದ ಕಮಲಯ್ಯನು ದೇಸಾಯಿಯವರ ಬಲದಿಂದ ಪ್ರವರ್ಧಮಾನಕ್ಕೆ ಬರುತ್ತಿರುವುದನ್ನು ಕಂಡು

ಸಂಪ್ರದಾಯವಾದಿ ಬ್ರಾಹ್ಮಣರು ಅವನ ಜಾತಿ ಹಿಡಿದು ಹೀಯಾಳಿಸುತ್ತಾರೆ. ಇದು ಬ್ರಾಹ್ಮಣ ಬ್ರಾಹ್ಮಣರ ನಡುವೆ ಇರುವ ಪಂಗಡದ ತಾರತಮ್ಯದ ಚಿತ್ರಣವಾಗಿದೆ. ಸಾವಿತ್ರಿಯ ಮದುವೆಯ ಸಂದರ್ಭದಲ್ಲಿ ಬ್ರಾಹ್ಮಣರೆಲ್ಲರು ಕಮಲಯ್ಯನ ಜಾತಿ ವಿಷಯಕ್ಕೆ ಸಂಬಂಧಿಸಿದಂತೆ ಗೊಂದಲಕ್ಕೆ ಒಳಗಾಗುತ್ತಾರೆ. ಬ್ರಾಹ್ಮಣ ಪಂಗಡದಲ್ಲಿ ಗೋವಿಂದಾಚಾರು, ಗೋಪಾಲಾಚಾರು, ಹಣಮಂತಾಚಾರು ಎನ್ನುವ ಹೆಸರನ್ನು ಕೇಳಿದ್ದೇವೆ. ಆದರೆ ಕಮಲಯ್ಯ ಎಂಬ ಹೆಸರೇ ಕೇಳಲ್ಲಿವಲ್ಲ ಎಂದು ಆ ಪಂಗಡದವರೆಲ್ಲಾ ಗುಸುಗುಟ್ಟುತ್ತಾರೆ. ಆದರೆ ಹೀಗೆ ಜಾತಿಯ ಕಟ್ಟನ್ನು ಭಂಗಮಾಡಿ ಲಗ್ನವಾಗುವ ವ್ಯಕ್ತಿಯೇ ದೊಡ್ಡ ಕುಟುಂಬಕ್ಕೆ ಮೂಲಪುರುಷನಾಗುತ್ತಾನೆ. ಅವನ ವಂಶದಲ್ಲಿ ಮೂರನೇ ತಲೆಗೆ ಸೇರಿದ ವಾಸಣ್ಣನ ಕಿರಿಯ ಮಗ ಮುಂಬಯಿಗೆ ಹೋದಾಗ ಅನ್ಯ ಪಂಗಡದ ಹುಡುಗಿಯನ್ನ ಮದುವೆಯಾಗಿ ಜಾತೀಯ ಸಿದ್ಧಕಟ್ಟನ್ನು ಭಗ್ನಗೊಳಿಸುತ್ತಾನೆ. ಹೀಗೆ ಜಾತಿಯ ವ್ಯವಸ್ಥೆಯ ಒಳಗೇ ಇರುವ ಅದನ್ನು ಮುರಿಯುವ ಘಟನೆಗಳನ್ನು ಕಾದಂಬರಿ ಸಂಭ್ರಮದಿಂದ ಚಿತ್ರಿಸುತ್ತದೆ.

ಪ್ರಸ್ತುತ ಭಾರತೀಯ ಸಮಾಜದಲ್ಲಿ ಜಾತಿ ವ್ಯವಸ್ಥೆ ಯಾವ ರೀತಿ ನಡೆಯುತ್ತಿದೆ ಎಂಬುದನ್ನು ಕಾದಂಬರಿ ಹಲವಾರು ಪಾತ್ರಗಳ ಮೂಲಕ ನಮ್ಮ ಕಣ್ಣ ಮುಂದೆ ನಡೆಯುವ ಹಾಗೆ ಚಿತ್ರಿಸುತ್ತದೆ. ಕಾದಂಬರಿಯು ಗ್ರಾಮೀಣ ಸಮಾಜದಲ್ಲಿನ ಜಾತಿ ವ್ಯವಸ್ಥೆಯನ್ನು, ಮಡಿ ಮೈಲಿಗೆ ಕಲ್ಪನೆಯನ್ನು ವ್ಯಂಗ್ಯವಾಗಿ ಕಾದಂಬರಿ ಚಿತ್ರಿಸುತ್ತದೆ. ಈ ಮೂಲಕ ಈ ಜಾತಿ ಆಚರಣೆಗಳು ಬಹಳ ಮುಖ್ಯವಲ್ಲ ಎಂದು ಸೂಚಿಸುತ್ತದೆ. ಆದ್ದರಿಂದ 'ಹಳ್ಳಬಂತು ಹಳ್ಳ' ಕಾದಂಬರಿಯು ಜಾತಿವ್ಯವಸ್ಥೆಯೊಳಗೆ ಇರುವ ಕುಟುಂಬದ ಕತೆಯಾದರೂ, ಅದನ್ನು ಮುರಿಯುವ ವ್ಯಕ್ತಿಗಳ ಕತೆಯೂ ಆಗಿದೆ. ಈ ಜಾತಿ ಕುರಿತು ಕಾದಂಬರಿಯು ಮುಕ್ತವಾದ ಧೋರಣೆಯನ್ನು ಹೊಂದಿದೆ.

### ೨.೨ 'ಹಳ್ಳಬಂತು ಹಳ್ಳ' ಮತ್ತು ವರ್ಗದ ಚಿತ್ರಣ

ಕನ್ನಡ ಬಹುತೇಕ ಕಾದಂಬರಿಗಳಲ್ಲಿ ಇರುವ ಸಮಾಜದ ಪರಿಕಲ್ಪನೆಯಲ್ಲಿ ವರ್ಗದ ಆಯಾಮವೂ ಇದೆ. ಪ್ರಸ್ತುತ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಉಚ್ಚ-ನೀಚ, ಮೇಲು-ಕೀಳು, ಬಲಿಷ್ಠ-ದುರ್ಬಲ, ಶೋಷಿತ-ಶೋಷಕ ಮುಂತಾದ ವರ್ಗಗಳ ಚಿತ್ರಗಳಿವೆ. ಅವುಗಳಲ್ಲಿ ಮುಖ್ಯವಾದವು ಮೇಲುವರ್ಗ ಮತ್ತು ಕೆಳವರ್ಗದವರ ಬದುಕಿನ ಚಿತ್ರಣಗಳು. ಬ್ರಾಹ್ಮಣರು ಸಾಮಾಜಿಕವಾಗಿ ಮೇಲು ಸ್ತರದವರು ಎಂಬುದು ಎಲ್ಲರಿಗೂ ತಿಳಿದ ವಿಷಯ. ಆದರೆ ಈ ಕಾದಂಬರಿಯಲ್ಲಿ ಬ್ರಾಹ್ಮಣರಲ್ಲಿ ಅನೇಕರು ಕೆಳವರ್ಗದವರು. ಬ್ರಾಹ್ಮಣರು ಕೆಳಜಾತಿಯವರ ಮೇಲೆ ಯಜಮಾನಿಕೆ ಮಾಡುವ ಚಿತ್ರಣಗಳು ಇದ್ದೇ ಇರುವಂತೆಯೇ, ಆರ್ಥಿಕವಾಗಿ ಬಲಿಷ್ಠರಾದ ಇತರೆ ಜಾತಿಯ ವ್ಯಕ್ತಿಗಳು ಬ್ರಾಹ್ಮಣರ ಮೇಲೆ ನಿಯಂತ್ರಣ

ಮಾಡುವುದನ್ನು ನೋಡಬಹುದು. ಬ್ರಾಹ್ಮಣರಲ್ಲೇ ಉಳ್ಳವರು ಕೆಳವರ್ಗದ ಬ್ರಾಹ್ಮಣರ ಮೇಲೆ ಯಜಮಾನಿಕೆ ಮಾಡುವುದನ್ನು ನೋಡಬಹುದು. ವಾಸಣ್ಣನು ಧಾರವಾಡದ ಶ್ರೀಮಂತ ಲಾಯರ ಮನೆಯ ಜತೆ ಬೀಗತನ ಮಾಡಿದ ಬಳಿಕ, ಪಡುವ ಕೀಳರಿಮೆ, ನವಲಗುಂದದ ಗ್ರಾಮೀಣ ಬ್ರಾಹ್ಮಣರು ಪಡುವ ನೋವುಗಳನ್ನು ಕಣ್ಣಿಗೆ ಕಟ್ಟುವಂತೆ ಕಾದಂಬರಿ ಚಿತ್ರಿಸುತ್ತದೆ. ಕೆಳವರ್ಗದ ಹಾರದ ಅಪಮಾನ ಮುಜುಗರ ಹಾಗೂ ನೋವಿನ ಪರವಾಗಿ ಕೂಡ ನಿಲ್ಲುವ ಚಿತ್ರಣಗಳನ್ನು ಕಾಣಬಹುದು.

ಉದಾಹರಣೆಗೆ, ಸಾಮಾಜಿಕವಾಗಿ ಉಚ್ಚ ಜಾತಿಯವರಾದ ವಾಸುದೇವಾಚಾರು ಇವರು ತಮ್ಮ ಭೂಮಿಯನ್ನು ಮೊರಬದ ರೈತ ಮಹದೇವಪ್ಪನಿಗೆ ಕೋರಿಗೆ ಕೊಟ್ಟಿರುತ್ತಾರೆ. ಮಹಾದೇವಪ್ಪನು ಇವರ ಅಸಹಾಯಕತೆಯನ್ನು ತಿಳಿದು ಕಿರುಕುಳವನ್ನು ಕೊಡಲಾರಂಭಿಸುತ್ತಾನೆ. ***'ಗೂಳಿ ಹಳ್ಳಕ್ಕೆ ಬಿದ್ದಾಗ ಆಳಿಗೊಂದು ಕಲ್ಲು'*** ಎಂಬ ಗಾದೆ ಮಾತಿನಂತೆ ಆರ್ಥಿಕ ಸಮಸ್ಯೆಯಿಂದ ಹಳ್ಳಕ್ಕೆ ಬಿದ್ದ ವಾಸುದೇವಾಚಾರು ಅವರ ಮೇಲೆ ರೈತ ಮಹದೇವಪ್ಪ, ಕಿರಾಣಿ ಅಂಗಡಿಯನ್ನು ಇಟ್ಟಿರುವ ಆದೋನಿಕೃಷ್ಣ್ಯಾ ಮತ್ತು ಬಂಡಿ ಗುಂಡಾಚಾರು ಇನ್ನು ಮುಂತಾದವರು ಯಜಮಾನಿಕೆ ಮಾಡುತ್ತಾರೆ.

ಭಾರತೀಯ ಸಮಾಜದಲ್ಲಿ ಮೇಲುವರ್ಗದವರ ವಿರುದ್ಧ ಕೆಳ ಮತ್ತು ಹಿಂದುಳಿದ ಜಾತಿಯವರು ಯಾವುದೇ ರೀತಿಯ ಪ್ರತಿಭಟನೆ ಮಾಡುವಂತಿರಲಿಲ್ಲ. ಆದರೆ ಅವರು ಇಲ್ಲಿ ಮೇಲುವರ್ಗದ'ವರ ಅಸಹಾಯಕತೆಯ ಜತೆ ಆಟವಾಡುವುದನ್ನು ಕಾದಂಬರಿ ಚಿತ್ರಿಸುತ್ತದೆ.

ನಮ್ಮ ಸಮಾಜದಲ್ಲಿ ದೀರ್ಘಕಾಲದಿಂದಲೂ ವಾಸಿಸುತ್ತಿರುವ ಹಿಂದುಳಿದ ವರ್ಗಗಳಾದ ಕುಂಬಾರರು, ಅಕ್ಕಸಾಲಿಗರು, ಕ್ಷೌರಿಕರು ಮುಂತಾದವರು ಆಧುನಿಕ ಜಗತ್ತಿನ ಬದಲಾವಣೆಗಳ ಜತೆಗೆ ತಮ್ಮನ್ನು ತಾವು ಅರ್ಥಪೂರ್ಣವಾಗಿ ತೊಡಗಿಸಿಕೊಳ್ಳುವಲ್ಲಿ ವಿಫಲರಾಗುತ್ತಿದ್ದಾರೆ. ಏಕೆಂದರೆ ಆಧುನಿಕ ಪ್ರಭಾವದಿಂದ ಸಮಾಜವು ನಿತ್ಯವೂ ಪರಿವರ್ತನೆಗೊಳ್ಳುತ್ತಿರುವುದರಿಂದ ಅವರ ಕುಲಕಸುಬುಗಳು ಸಹ ಬೇರೆಯ ಬಗೆಯ ಬಿಕ್ಕಟ್ಟುಗಳನ್ನು ಅನುಭವಿಸುತ್ತಿವೆ. 'ಹಳ್ಳಬಂತುಹಳ್ಳ' ಕಾದಂಬರಿಯು ಹಿಂದುಳಿದ ಈ ಕೆಳವರ್ಗದವರ ಕುಲಕಸುಬುಗಳ ಬಿಕ್ಕಟ್ಟುಗಳನ್ನು ಯಥಾವತ್ತಾಗಿ ಚಿತ್ರಿಸುವುದು. ಇದು ಕಾದಂಬರಿಯು ಕೆಳಜಾತಿ ವರ್ಗಗಳ ವಿಷಯದಲ್ಲಿ ಇಟ್ಟುಕೊಂಡಿರುವ ಕಳಕಳಿಯನ್ನು ಸೂಚಿಸುತ್ತದೆ.

***"_ಗುರುನಾಥಾ ಈ ನಮಸ್ಕಾರ ಚಮತ್ಕಾರ ಎಲ್ಲಾ ಸೋಗು ಸಾಕು ಮಾಡಿನ್ನ_ ನನಗ ದಯಾಮಾಡಿ ಒಂದು ದುಡ್ಡಿನ ವಿಷಾ ತರಿಸಿಕೊಟ್ಟು ಬಿಡು_ದೇವರ ದಯದಿಂದ್ ಮನ್ಯಾಗ ಮೂರು***

*ಮಂದಿ ಇದ್ದೇವಿ. ಒಂದ ದುಡ್ಡಿನ ವಿಷ ಯಲ್ಲರಿಗೂ ಸಾಕಾಗ್ತದ"*(ಪು ಸ ೧೭)ಇಲ್ಲಿ ಬ್ರಾಹ್ಮಣರ ಅಸಹಾಯಕತೆ ನಮಗೆ ತಿಳಿಯುತ್ತದೆ. ಬ್ರಾಹ್ಮಣರು ಮಧ್ಯಮ ವರ್ಗದ ಜನರ ಹಾಗೆ ಸಾಧಾರಣ ಜೀವನವನ್ನು ಸಾಗಿಸುವುದನ್ನು ಅವರ ನೋವುಗಳನ್ನು ಕಾದಂಬರಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಯಂಕಣ್ಣಾಚಾರು ಹಣಕಾಸಿನ ಸಮಸ್ಯೆಯಿಂದ ಜೀವನವೆಂಬ ಸುಳಿಯಲ್ಲಿ ಸುಳಿದಾಡಿ ಅದರಿಂದ ಬೇಸರವೊಂದಿ ಕೊನೆಗೆ ಒಂದು ತೊಟ್ಟು ವಿಷಕ್ಕೆ ಆಸರೆಯಾಗುವುದನ್ನು ಕಾದಂಬರಿ ಶೋಚನೆವಾಗಿ ಚಿತ್ರಿಸುತ್ತದೆ.

*" ತುಸು ದೂರದಲ್ಲಿ ಒಂದು ಜಟಕ ಬಂಡಿ ನಿಂತಿತ್ತು. ಜಟಕಾದವ ವಾಸುದೇವಾಚಾರ್ಯರಿಗೆ "ನವಲಗುಂದಕ್ಕೆ ಒಂದು ರೂಪಾಯಿ ಕೊಡ್ರಿ" ಅಂದ.*

*"ಎಂಟ ಆಣೆ" ಎಂದರು ವಾಸುದೇವಾಚಾರು*

*"ಹನ್ನೆರಡಾಣೆ" ಎಂದು ಜಟಕಾ.*

*"ಎಂಟ ಆಣೆ"*

*" ಹೋಗಲಿ ಒಂದು ಹತ್ತ ಆಣೆ ಕೊಡ್ರಿ"*

*"ಎಂಟ ಆಣೆ ಅಂದರ... ಎಂಟ ಆಣೆ – ಬಿಲ್ಲಿ ಹೆಚ್ಚಿಲ್ಲ"* ಆಚಾರು ಇಲ್ಲಿ ಬ್ರಾಹ್ಮಣರ ಒಂದು ಆರ್ಥಿಕ ಪರಿಸ್ಥಿತಿ ನಮಗೆ ತಿಳಿಯುತ್ತದೆ. ಅಂದಿನ ಕಾಲದಲ್ಲಿ ಮೇಲು ವರ್ಗದ ಬ್ರಾಹ್ಮಣರು ಹಣಕಾಸಿನ ಕೊರತೆಯಿಂದ ಬಳಲುತ್ತಿರುವ ಚಿತ್ರಣವನ್ನು ಈ ಕಾದಂಬರಿ ಕಟ್ಟಿಕೊಟ್ಟಿದೆ. ಭಾರತೀಯ ಸಮಾಜವು ಏಣಿ ಶ್ರೇಣಿ ವ್ಯವಸ್ಥೆಯಿಂದ ಕೂಡಿದ್ದು, ಇಲ್ಲಿ ಬ್ರಾಹ್ಮಣರು ಮೇಲು ವರ್ಗದವರಾಗಿರಬಹುದು. ಆದರೆ ಅವರ ಆರ್ಥಿಕ ಪರಿಸ್ಥಿತಿ ಕೆಳವರ್ಗದವರಾಗಿ ಪರಿವರ್ತಿಸುತ್ತದೆ. ಎಂಬುದನ್ನು ಕಾದಂಬರಿ ವಿಷಾದನೀಯವಾಗಿ ಚಿತ್ರಿಸುತ್ತದೆ.

ಪ್ರಸ್ತುತ ಭಾರತೀಯ ಸಮಾಜದಲ್ಲಿನ ಅನೇಕ ವರ್ಗಗಳು ಯಾವ ರೀತಿ ನಡೆದುಕೊಳ್ಳುತ್ತಿವೆ. ಎಂಬ ನೈಜ ಚಿತ್ರಣವನ್ನು ಕಾದಂಬರಿ ನಮ್ಮ ಕಣ್ಣ ಮುಂದೆ ನಡೆಯುತ್ತಿರುವ ಹಾಗೆ ಕಟ್ಟಿಕೊಟ್ಟಿದೆ. ಅದಲ್ಲದೆ ಕರ್ನಾಟಕದಲ್ಲಿನ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ಅಲ್ಲಿಇರುವ ವರ್ಗತಾರತಮ್ಯವನ್ನು ಅದರಲ್ಲೂ ಮೇಲುಜಾತಿಯವರ ಅಸಹಾಯಕತನವನ್ನು ಕಾದಂಬರಿ ಸಂಪೂರ್ಣವಾಗಿ ಚಿತ್ರಿಸುತ್ತದೆ.

### ೨.೩. 'ಹಳ್ಳಬಂತು ಹಳ್ಳ' ಮತ್ತು ಲಿಂಗಭೇದ

ಪ್ರಸ್ತುತ ಭಾರತೀಯ ಸಮಾಜದಲ್ಲಿ ಜಾತಿಪದ್ಧತಿಯ ಜತೆಗೆ ಲಿಂಗಭೇದದ ಆಯಾಮವೂ ಇದೆ. ಈ ಲಿಂಗಭೇದವು ದೈನಿಕ ಬದುಕಿನ ಅನೇಕ ಸಣ್ಣಪುಟ್ಟ ಸಂಗತಿಗಳಲ್ಲಿ ಪ್ರಕಟವಾಗುತ್ತ ಇರುತ್ತದೆ. ಕನ್ನಡ ಕಾದಂಬರಿಗಳು ಉದ್ದೇಶಪೂರ್ವಕವಾಗಿಯೋ ಸಹಜವಾಗಿಯೊ ಈ ಭೇದನೀತಿಯನ್ನು ಕಾಣಿಸುತ್ತವೆ. ಅದೇ ರೀತಿ ಶ್ರೀನಿವಾಸ ವೈದ್ಯರ

'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲೂ ಲಿಂಗಭೇದ ನೀತಿಯ ಬೇರೆಬೇರೆ ಬಗೆಯ ಚಿತ್ರಣ ಇರುವುದನ್ನ ಕಾಣಬಹುದು. ಒಬ್ಬ ಹುಡುಗಿ ಮೈನೆರೆದ ಮೇಲೆ ಆ ಹುಡುಗಿ ಮದುವೆಯಾಗುವ ತನಕ ತಂದೆಯಾದವನು ಮಾಡುವ ರೋದನ ಹೀಗಿದೆ.

***"ನನ್ನ ಮಗಳು ಹುಚ್ಚರಂಡಿ, ಇದ ಸುಮುಹೂರ್ತ ಎಂದು ತಿಳಿದು ನೆರೆದ ಕುತಾಳವಾ..... ಮೈನೆರೆದು ಕೂತಾಳ ಆರು ತಿಂಗಳಾತು. ಕದ್ದುಮುಚ್ಚಿ ನಡುರಾತ್ರ್ಯಾಗ ಎಬ್ಬಿಸಿ ತಿಂಗಳು ತಿಂಗಳು ನೀರು ಹಾಕ್ತಾಳ ನನ್ನ ಹೆಂಡಿತಿ..... ಅಜೂಬಾಜೂದವರಿಗೆ ಗೊತ್ತಾದ್ರ..... ನನ್ನ ಹರಕೊಂಡು ತಿಂತಾರಪಾ ಗುರುನಾಥಾ ಹರಕೊಂಡು ತಿಂತಾರ"*** (ಪು.೧೮) ಇಲ್ಲಿ ಯಂಕಣ್ಣಾಚಾರು ಜಾತಿಯಿಂದ ಮೇಲುಸ್ತರಕ್ಕೆ ಸೇರಿದವರು. ಆದರೆ ಆರ್ಥಿಕವಾಗಿ ಬಡವರು. ಅವರೊಬ್ಬ ತಂದೆ. ಅವರ ಪರಿತಪಿಸುವ ಚಿತ್ರಣವು ಎಲ್ಲ ತಂದೆಯರ ದುಗುಡದ ಸಂಕೇತವಾಗಿದೆ. ಹೆಣ್ಣು ಮೈನೆರೆಯುವುದು ನೈಸರ್ಗಿಕವಾದ ಘಟನೆ. ಆದರೆ ಅದನ್ನು ಸಮಾಜದ ಕಟ್ಟುಪಾಡುಗಳು ತಮ್ಮದೇ ಆದ ನಿಯಮದಲ್ಲಿ ನೋಡುತ್ತವೆ. ಅವು ತಂದೆಯ ಕಷ್ಟವನ್ನಾಗಲಿ, ಆ ಹೆಣ್ಣಿನ ಕಷ್ಟವನ್ನಾಗಲಿ ನೋಡುವುದಿಲ್ಲ. ಅವುಗಳ ಜಡತೆ ಮತ್ತು ಅಮಾನುಷತೆಯನ್ನು ಕಾದಂಬರಿ ಯಂಕಣ್ಣಾಚಾರು ಅವರ ದುಃಖದ ಮೂಲಕ ಮಂಡಿಸುತ್ತದೆ. ಇದು ಅದು ಲಿಂಗತಾರತಮ್ಯ ಮತ್ತು ವರ್ಗಸಂಕಟಗಳನ್ನು ಏಕಕಾಲಕ್ಕೆ ಹಿಡಿಯುತ್ತದೆ. ಇದಕ್ಕೆ ಹೋಲಿಸಿದರೆ ಕೆಳಜಾತಿಯಲ್ಲಿ ಹೆಣ್ಣಿಗೆ ಈ ಬಗೆಯ ಕಷ್ಟಗಳಿಲ್ಲ. ಹೆಣ್ಣಿನ ತಂದೆತಾಯಂದಿರಿಗೂ ಕಷ್ಟಗಳಿಲ್ಲ. ಸಮುದಾಯವು ಉಚ್ಚವೆನಿಸಿಕೊಂಡರೂ, ಅದರ ಆಲೋಚನೆ ಮತ್ತು ವರ್ತನೆಗಳು ಅತ್ಯಂತ ಹಿಂದುಳಿದಿರಬಲ್ಲವು ಎಂದು ಕಾದಂಬರಿ ಸೂಚಿಸುತ್ತದೆ.

***" ಏನಪಾ ದರಿದ್ರ ನವಲುಗುಂದ, ಕಾಶಿ, ಗಯಾ, ಪುಣೇದಾಗ ಭ್ರಾಂಭ್ರ ಊರ? ಕೈಗೊಬ್ಬ ಕಾಲಿಗೊಬ್ಬ ವರ ಇದ್ದಾನ? ಇಲ್ಲೆ ಒಟ್ಟು ಹನ್ನೆರಡು ಮನಿ ಅವ ಭ್ರಾಂಬರವು, ಯಾರ ಮನ್ಯಾಗೂ ಮದುವಿ ಗಂಡು ಇಲ... ಲವಡಿ ಮಕ್ಕಳು ನವಲುಗುಂದದ ಭ್ರಾಂಬ್ರಿಗೆ ಗಂಡು ಹಡಿಯೋ ಕುವತ್ತ ಇಲ್ಲೋ ಏನೋ ಅಂತೀನಿ..."*** (ಪು.೧೮) ಇಲ್ಲಿ ಯಂಕಣ್ಣಾಚಾರು ತನ್ನ ಮಗಳು ಸಾವಿತ್ರಿಯನ್ನು ಹೇಗಾದರೂ ಮಾಡಿ ಮದುವೆ ಮಾಡಬೇಕು ಎಂದು ಯೋಚಿಸುತ್ತಾ ಆಕೆಯನ್ನು ಬಂದ ಅಪರಿಚಿತನಾದ ಕಮಲಯ್ಯನಿಗೆ ಕೊಟ್ಟು ವಿವಾಹ ಮಾಡಿಸುತ್ತಾರೆ. ಅವರ ಈ ನಿರ್ಣಯದಲ್ಲಿ ಹೆಣ್ಣಿನ ಇಷ್ಟಾನಿಷ್ಟಗಳನ್ನು ಕೇಳುವ ಪ್ರಶ್ನೆಯೇ ಬರುವುದಿಲ್ಲ. ಎಂತಲೇ ಮದುವೆಯಾಗುವ ಹೆಣ್ಣು ಈ ಕುರಿತು ಏನೆಂದು ಆಲೋಚಿಸುತ್ತಾಳೆ ಎಂಬ ಬಗ್ಗೆ ಕಾದಂಬರಿ ವಿವರಣೆ ಕೊಡುವುದಿಲ್ಲ. ಇದು ಕಾದಂಬರಿಯು ತೋರುವ ಅಸೂಕ್ಷ್ಮತೆ ಎನ್ನಲು ಸಾಧ್ಯವಿಲ್ಲ. ಬದಲಿಗೆ ಯಂಕಣ್ಣಚಾರು ಪಾತ್ರವು ಹಿಂದು ಸಮಾಜದ ಪರಿಸರದ ಒತ್ತಡಕ್ಕೆ ಸಿಲುಕಿ ಈ ಬಗೆಯ ಆಲೋಚನೆ ಮಾಡುತ್ತಾರೆ. ಅವರ ಆಲೋಚನೆ

ಮತ್ತು ನಿರ್ಣಯದ ಹಿಂದೆ ಕೆಲಸ ಮಾಡುವದು ಜನಪರವಾದ. ತಮ್ಮದೇ ಜಾತಿಯ ಮಡಿವಂತ ಸಮಾಜವು ಹೆಣ್ಣಿನ ವಿಷಯದಲ್ಲಿ ಇಟ್ಟುಕೊಂಡಿರುವ ಪೂರ್ವಗ್ರಹಗಳು. ಇವನ್ನು ಕಾದಂಬರಿ ನಿಷ್ಠುರವಾಗಿ ಚಿತ್ರಿಸುತ್ತದೆ.

ಈ ಕಾದಂಬರಿಯಲ್ಲಿ ಮಹಿಳೆಯರು ಮಕ್ಕಳನ್ನು ಹೆರುವ ಯಂತ್ರವಾಗಿರುವ ಚಿತ್ರಣಗಳಿವೆ. ಕಮಲಯ್ಯನಿಗೆ ಕೆಲವು ವರ್ಷಗಳ ಕಾಲ ಮಕ್ಕಳಿಲ್ಲವಾದ ಕಾರಣವಾಗಿ ಆತ ಊರ ಹೊರಗೆ ಒಂದು ಗುಡಿಯನ್ನು ಕಟ್ಟಿಸಿ ಅಲ್ಲಿ ಲಕ್ಷ್ಮೀನಾರಾಯಣನ ವಿಗ್ರಹವನ್ನು ಪ್ರತಿಷ್ಠಾಪಿಸುತ್ತಾನೆ. ನಂತರ ಸಾವಿತ್ರಿಯು ವರ್ಷಕ್ಕೊಂದು ಮಗುವಿನಂತೆ ಸುಮಾರು ಏಳು-ಎಂಟು ಮಕ್ಕಳನ್ನು ಹೆತ್ತು ವಸುಂಧರೆಯಾಗುತ್ತಾಳೆ. ಭಾರತೀಯ ಸಮಾಜದಲ್ಲಿ ಮಕ್ಕಳನ್ನು ಹೆರದ ಮಹಿಳೆಗೆ ಕೆಟ್ಟದಾಗಿ ದೂಷಿಸಲಾಗುತ್ತದೆ. ಇಂತಹ ದೂಷಣೆಗಳಿಂದ ವಿಮುಕ್ತಿ ಪಡೆಯಬೇಕಾದರೆ ಸಂತಾನ ಪ್ರಾಪ್ತಿಸುವುದು ಅವಳಿಗೆ ಮುಖ್ಯವಾಗಿರುತ್ತದೆ. ಹಾಗೆ ಮಕ್ಕಳನ್ನು ಪಡೆಯದ ಮಹಿಳೆಯನ್ನು ಸಮಾಜವು ನಡೆಸಿಕೊಳ್ಳುವ ಬಗೆಯ ಬಗ್ಗೆ ಕಾದಂಬರಿಯು ವಿಮರ್ಶೆ ಮಾಡುವಂತೆ ಚಿತ್ರಗಳನ್ನು ತರುತ್ತದೆ.

***"ಅಂಬಕ್ಕ ಹತ್ತಕ್ಕ ಲಗ್ನ ಮಾಡಿಕೊಂಡು ಹನ್ನೆರಡಕ್ಕೆ ದೊಡ್ಡಾಕಿ ಆಗಿ, ಹದಿಮೂರಕ್ಕೆ ಗಂಡನ್ನ ಕಳೆದುಕೊಂಡು ತಲಿಬೋಳಿಸಿಕೊಂಡು ಕೂತಾಳ. ಗಂಡ ಸತ್ತ ಕೂಡಲೇ ಅತ್ತೀಮನೆಯವರು ಅಂಬಕ್ಕನ ಮೈಮ್ಯಾಲಿನ ಭಂಗಾರ ಕಿತ್ತಿಕೊಂಡು ತವರಮನೀಗೆ ತಂದು ಬಿಟ್ಟು ಹೆಂತಾ ಸುಡುಗಾಡು ಹೆಣ್ಣಿನ ಕಾಲ್ಗುಣನೋ ಏನೋ"*** (ಪು.ಸಂ. ೩೧) ಇಲ್ಲಿ ಅಂಬಕ್ಕ ಎನ್ನುವ ಹೆಣ್ಣು ಕೇವಲ ೧೩ನೇ ವಯಸ್ಸಿಗೆ ವಿಧವೆಯಾದವಳು. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮತ್ತು ಸಂಪ್ರದಾಯವಾದಿ ಸಮಾಜದಲ್ಲಿ ಹೀಗೆ ನೊಂದು ಹೆಣ್ಣನ್ನು ಎಷ್ಟು ಹೀನವಾಗಿ ನಡೆಸಿಕೊಳ್ಳಲಾಗುತ್ತದೆ ಎಂಬುದಕ್ಕೆ ಕಾದಂಬರಿಯಲ್ಲಿರುವ ಅಂಬಕ್ಕನ ಜೀವನ ಸಾಕ್ಷಿಯಾಗಿ ನಿಂತಿದೆ.

ಈ ಕಾದಂಬರಿ ಬ್ರಾಹ್ಮಣ ಸಮುದಾಯದ ವಿಧವೆಯರ ಜೀವನವನ್ನು ಭೀಕರವಾಗಿ ಚಿತ್ರಿಸಿದೆ. ಇದನ್ನು ಒಂದು ಪ್ರಸಂಗದ ಮೂಲಕ ಅರಿಯಬಹುದು. "ಒಬ್ಬ ಬ್ರಾಹ್ಮಣ ವಿಧವೆ ಬರಿಕೊಡ ತಕ್ಕೊಂಡು ನೀರು ತರಲೆಂದು ಹೊರಟವಳು ವಾಸುದೇವಾಚಾರ ಎದುರೇ ಬಂದಳು. ಆಗ ಆಚಾರು ಖಿನ್ನರಾಗಿ ***"ಮೊದಲೇ ತಲಿ ಬೋಳಿಸಿಗೊಂಡಾಕೆ, ಮೌಲ್ಯ ಬರಿಗೊಡ ಇಕಿನೂ ಈಗ ಬರಬೇಕಾಗಿತ್ತಾ..... ಮಾರುತಿರಾಯಾ..... ಏನರಾ ಅದಪ್ಪಾ ನಿನ್ನ ಮನಸ್ಸಿನ್ಯಾಗ"*** (ಪು.ಸಂ. ೧೨೪) ಎಂದು ಎರಡು ನಿಮಿಷಗಳ ಕಾಲ ಅಲ್ಲಿಯೇ ನಿಲ್ಲುತ್ತಾರೆ.

೧೯ನೇ ಶತಮಾನದ ಕೊನೆಯ ಭಾಗದಲ್ಲಿ ಮತ್ತು ೨೦ನೇ ಶತಮಾನದ ಮೊದಲ ಭಾಗದಲ್ಲಿ ಕರ್ನಾಟಕದ ಉಚ್ಚಜಾತಿಯ ಸಮಾಜದಲ್ಲಿ ವಿಧವೆಯರು ಯಾವ ರೀತಿ

ಅಪಶಕುನದ ಸಂಕೇತಗಳಾಗಿ ಜೀವನ ಸಾಗಿಸುತ್ತಿದ್ದರು ಎಂಬುದು ಇಲ್ಲಿ ತಿಳಿಯುತ್ತದೆ. ಆದರೆ ಕಾದಂಬರಿಯ ಹೆಗ್ಗಳಿಕೆ ಇರುವುದು ಇಂತಹ ಅಸಹಾಯಕ ದಮನಿತ ಮಹಿಳೆಯರು ತಮ್ಮ ಜೀವನದಲ್ಲಿ ಮಾಡುವ ಹೋರಾಟಗಳನ್ನು ಚಿತ್ರಿಸುವುದರಲ್ಲಿ. ಇಂತಹ ಮಹಿಳೆಯರು ತಮ್ಮ ನೋವಿನ ಜೀವನದಿಂದ ಕಠಿಣರಾಗಿ ಉಳಿದವರ ಮೇಲೂ ಕೂಡ ಕ್ರೌರ್ಯವನ್ನು ತೋರುವ ಹಾಗೆ ಚಿತ್ರಿಸಿದ್ದಾರೆ. ಕಾದಂಬರಿಯು ಇನ್ನೂ ಅನೇಕ ಹೆಣ್ಣಿನ ಪಾತ್ರಗಳನ್ನು ತರುತ್ತದೆ ಮತ್ತು ಅವು ಶೋಷಣೆಗೆ ಒಳಗಾಗುವುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ.

ಪ್ರಸ್ತುತ ಕಾದಂಬರಿಯು ಹೆಣ್ಣನ್ನು ಒಂದು ಭೋಗದ ವಸ್ತುವಾಗಿ ಚಿತ್ರಿಸುವ ಸಮಾಜವನ್ನು ಚಿತ್ರಿಸುತ್ತದೆ. ಕಾದಂಬರಿಯಲ್ಲಿ ಸಾತ್ವಿಕ ಪಾತ್ರವಾಗಿರುವ ವಾಸುದೇವಾಚಾರು ರುಕುಮಾಳನ್ನು ಕಂಡು ಮೋಹಕ್ಕೆ ಒಳಗಾಗುತ್ತಾರೆ. ಬೋಧರಾಯರು ಕೂಲಿ ಹೆಣ್ಣಾಳುಗಳ ಸೊಂಟವನ್ನು ನೋಡಿ ಕಾಮಬಾಧೆಗೆ ಒಳಗಾಗುತ್ತಾನೆ; ನೊಂದಣಿ ಕಛೇರಿಯಲ್ಲಿ ಹೆಂಗಸರ ಹೆಬ್ಬೆಟ್ಟು ಗುರುತನ್ನು ಹಾಕಿಸುವಾಗ ಅವನ ವರ್ತನೆಗಳು ಲಂಪಟವಾಗಿವೆ. ವೆಂಕಣ್ಣನು ಅಣ್ಣಿಗೇರಿಯಲ್ಲಿ ಒಬ್ಬ ಮುಸ್ಲಿಂ ಮಹಿಳೆಯನ್ನು ಇಟ್ಟುಕೊಳ್ಳುತ್ತಾನೆ. ಇವನ್ನೆಲ್ಲ ಕಾದಂಬರಿಯು ಯಾವುದೇ ಉತ್ಪ್ರೇಕ್ಷೆಯಿಲ್ಲದೆ, ವಾಸ್ತವಿಕ ದೃಷ್ಟಿಕೋನದಲ್ಲಿ ತರುತ್ತದೆ. ಹೆಣ್ಣನ್ನು ಒಂದು ಭೋಗದ ವಸ್ತುವಾಗಿ ಇಲ್ಲಿನ ಪುರುಷರು ಗ್ರಹಿಸಿರುವುದನ್ನ ಅದು ಕಾಣಿಸುತ್ತದೆ. ಬೋಧರಾಯನ ಪ್ರಕಾರ ಹೆಣ್ಣು ಕೇವಲ ಲೈಂಗಿಕ ವಸ್ತು ಮಾತ್ರವಲ್ಲ, ಆಕೆಯು ಯಾವಾಗಲೂ ಗಂಡನ ಸಂತೃಪ್ತಿ ಪಡಿಸಲು ಸೇವೆ ಮಾಡುತ್ತಿರಬೇಕಾದ ದಾಸಿ ಕೂಡ. ಆಕೆಗೆ ತನ್ನ ಗಂಡನ ಎದುರು ನಿಂತು ಮಾತಾಡುವಂತಿಲ್ಲ. ಅವಳು ಯಾವಾಗಲೂ ಮನೆಯಲ್ಲಿ ಗಂಡನ ಸರಿಸಮಳಾಗಿ ಜೀವಿಸುವಂತಿಲ್ಲ ಇಂತಹ ಜೀವನವನ್ನು ಕಾದಂಬರಿ ಎದೆಕಲಕುವಂತೆ ಚಿತ್ರಿಸುತ್ತದೆ.

ವರದಕ್ಷಿಣೆ ವಿಷಯಕ್ಕೆ ಸಂಬಂಧಿಸಿದಂತೆ ಸಂಪ್ರದಾಯಬದ್ಧ ಬ್ರಾಹ್ಮಣ ಸಮುದಾಯವು ಕಠೋರವಾಗಿ ವರ್ತಿಸುತ್ತದೆ. ಸೋನಿಯ ಮದುವೆ ಸಂದರ್ಭದಲ್ಲಿ ವಬನು ಉಂಗುರದ ತೂಕ ಕಡಿಮೆ ಇದೆ ಎಂದು ತನ್ನ ಮಡದಿಗೆ ಹಿಂಸೆ ಕೊಡುತ್ತಾನೆ. ಮಡದಿಯ ತಂದೆತಾಯಿಗಳಿಗೆ ಶೋಷಿಸುತ್ತಾನೆ. ಮದುವೆಯಾದ ನಂತರ ವರದಕ್ಷಿಣೆ ವಿಷಯಕ್ಕೆ ಕಿರುಕುಳ ಕೊಡುತ್ತ ಕಡೆಗೆ ಅವಳನ್ನು ಬಾವಿಗೆ ನೂಕಿ ಸಾಯಿಸುತ್ತಾನೆ. ಈ ಪ್ರಸಂಗವನ್ನು ಈ ಕಾದಂಬರಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಪುರುಷ ಸಮಾಜವು ಜೀವನದ ಅನೇಕ ಹಂತಗಳಲ್ಲಿ ಹೆಣ್ಣನ್ನು ಶೋಷಣೆಗೆ ಒಳಗು ಮಾಡುವುದನ್ನು ಕಾದಂಬರಿ ವಸ್ತುನಿಷ್ಠವಾಗಿ ಚಿತ್ರಿಸುವ ಮೂಲಕ ಅದರ ಅಮಾನವೀಯತೆಯನ್ನು ಹೊರಗೆ ಹಾಕುತ್ತದೆ.

ಬ್ರಾಹ್ಮಣ ಸಮಾಜದ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೂಡ ಲಿಂಗ ತಾರತಮ್ಯ ಮಾಡುವುದನ್ನು ಕಾದಂಬರಿ ಕಾಣಿಸುತ್ತದೆ. ಇಲ್ಲಿ ವಾಸುದೇವಾಚಾರರ ಮಗನಾದ ಪಾಂಡುವಿಗೆ ಮತ್ತು ವೆಂಕಣ್ಣನ ಮಕ್ಕಳಾದ ಕೇಶವ ಮತ್ತು ರಾಮೂ ಧಾರವಾಡದಲ್ಲಿ ಇರಿಸಿ ಶಿಕ್ಷಣ ಕೊಡಲಾಗುತ್ತದೆ. ಆದರೆ ಮನೆಯ ಹೆಣ್ಣು ಮಕ್ಕಳಿಗೆ ಅದೇ ಊರಿನಲ್ಲಿರುವ ಸರ್ಕಾರಿ ಶಾಲೆಯಲ್ಲೂ ಶಿಕ್ಷಣ ಕೊಡಿಸುವುದಿಲ್ಲ. ಸ್ತ್ರೀಯು ಕೇವಲ ಅಡುಗೆ ಮನೆಯ ಶಿಕ್ಷಣವನ್ನು ಕಲಿತರೆ ಸಾಕು ಎಂದು ಸಮಾಜವು ಪರಿಭಾವಿಸಿದೆ. ಇದನ್ನು ಈ ಸಮಾಜದ ಮಹಿಳೆಯರೂ ಕೂಡ ಒಪ್ಪಿಕೊಂಡಿದ್ದಾರೆ. ಇದು ತುಳಿಯುವವರ ನಿಲುವನ್ನು ತುಳಿತಕ್ಕೆ ಒಳಗಾದವರೂ ಒಪ್ಪಿಕೊಂಡಿರುವ ವೈರುಧ್ಯಕರ ಸಂಗತಿ. ಈ ದುರಂತ ಸನ್ನಿವೇಶವು ನಮ್ಮ ಸಾಂಪ್ರದಾಯಕ ಸಮಾಜದ ಕಪ್ಪುಮುಖದ ಸಂಕೇತವಾಗಿದೆ. ಆದರೆ ಆಧುನಿಕತೆಯು ನಂತರದ ತಲೆಮಾರಿನ ಮಹಿಳೆಯರಿಗೆ ಶಿಕ್ಷಣದ ಆವಕಾಶ ಸಿಕ್ಕಿ ಅವರ ಉತ್ತಮ ಜೀವನದ ಬಾಗಿಲನ್ನು ತೆರೆದುಕೊಳ್ಳುತ್ತಾರೆ. ಇದನ್ನು ಕಾದಂಬರಿಯು ಬಹಳ ಸಕಾರಾತ್ಮಕವಾಗಿ ಚಿತ್ರಿಸುತ್ತದೆ.

ಈ ಕಾದಂಬರಿಯಲ್ಲಿ ಚಿತ್ರಣಗೊಂಡಿರುವ ಸಮಾಜವನ್ನು ಅವಲೋಕಿಸಿದಾಗ, ಪ್ರಾರಂಭದಿಂದ ಹಿಡಿದು ಕೊನೆಯವರೆಗೆ ಸ್ತ್ರೀಯನ್ನು ಒಂದಲ್ಲಾ ಒಂದು ವಿಧದಲ್ಲಿ ಲಿಂಗತಾರತಮ್ಯದ ಅನ್ಯಾಯಗಳಿಗೆ ಒಳಗು ಮಾಡಿರುವುದು ತಿಳಿಯುತ್ತದೆ. ಸ್ತ್ರೀಯನ್ನು ಎಲ್ಲಾ ಹಂತದಲ್ಲೂ ತಾರತಮ್ಯ ಉಂಟು ಮಾಡಿ ಪುರುಷನಿಗೆ ಹೆಚ್ಚಿನ ಅವಕಾಶಗಳನ್ನು ನೀಡಿ ಸ್ತ್ರೀಯನ್ನು ಸಮಾಜದ ಸಾಂಪ್ರದಾಯಿಕ ಚೌಕಟ್ಟಿಗೆ ಒಳಪಡಿಸಿ ಅವಳಿಗೆ' ಸಮಾನ ಅವಕಾಶಗಳನ್ನು ಕೊಡದೆ ವಂಚಿಸಿರುವುದು ತಿಳಿಯುತ್ತದೆ. ಅಧಿಕಾರ, ಸ್ವಾತಂತ್ರ್ಯ, ಸೌಲಭ್ಯ, ಹಕ್ಕು ಸಮಾನ ಅವಕಾಶಗಳಿಂದ ವಂಚಿತ ಮಹಿಳೆ ತನ್ನ ನೋವನ್ನು ನುಂಗಿ ಬಾಯಿದ್ದು ಮೂಕಿಯಾಗಿ ಬಾಳುತ್ತಿರುವುದು ತಿಳಿಯುತ್ತದೆ. ಆದರೆ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಲ್ಲಿ ಅಡ್ಡಿಯಾಗಿರುವ ತೊಡಕಾಗಿರುವ ಈ ಎಲ್ಲ ಅಡೆತಡೆಗಳ ಒಳಗೇ ಹೆಣ್ಣು ತನ್ನ ಅಸ್ತಿತ್ವಕ್ಕಾಗಿ ಹೋರಾಟ ಮಾಡುತ್ತಾಳೆ. ಇದನ್ನು ಸಹ ವೈದ್ಯರು ಚಿತ್ರಿಸುತ್ತಾರೆ. ಕಾದಂಬರಿಯಲ್ಲಿ ಚಿತ್ರಿತವಾಗಿರುವ ಧೀಮಂತ ಮಹಿಳೆಯರ ಪಾತ್ರಗಳು ಕಾದಂಬರಿ ಮೂಡಿಸುವ ಸ್ತ್ರೀವಾದದ ಸಂಕೇತಗಳಂತಿವೆ.

ಹೀಗೆ ಕಾದಂಬರಿಕಾರರಾದ ಶ್ರೀನಿವಾಸ ವೈದ್ಯರು ಆಧುನಿಕ ಸ್ತ್ರೀವಾದಿಯಲ್ಲ. ಆದರೆ ಆಧುನಿಕ ಸ್ತ್ರೀವಾದಿ ಚಿಂತನೆಗಳಿಗೆ ಒಂದು ಕಾಲಘಟ್ಟದ ಜೀವನವನ್ನು ವಾಸ್ತವ ವಾದಿಯಾಗಿ ಹಿಡಿದು ಕೊಡುವ ಮೂಲಕ ಅವರು ಚಿಂತನೆಗೆ ವಿಶ್ಲೇಷಣೆಗೆ ಸಮೃದ್ಧವಾದ ಆಕರವನ್ನು ಒದಗಿಸಿದ್ದಾರೆ.

### ೨.೪. ವಿವಾಹ ಮತ್ತು ಕುಟುಂಬ

ಕಾದಂಬರಿಯು ಅನೇಕ ಬಗೆಯ ದಾಂಪತ್ಯ ಜೀವನದ ಮಾದರಿಗಳನ್ನು ಚಿತ್ರಿಸುತ್ತದೆ. ಒಂದೇ ಜಾತಿಯ ಒಳಗೆ ನಡೆಯುವ ವಿವಾಹದ ಮಾದರಿಯಿರಬಹುದು. ಅಥವಾ ಅಂತರ್ಜಾತಿ ವಿವಾಹಗಳಾಗಿರಬಹುದು, ಹೀಗೆ ಅನೇಕ ರೀತಿಯ ವಿವಾಹದ ಮಾದರಿಗಳನ್ನು ಕಾದಂಬರಿ ಒಳಗೊಂಡಿದೆ. ಇಲ್ಲಿ ಕಂಡುಬರುವ ವಿವಾಹಗಳ ಹಿಂದೆ ಸಾಕಷ್ಟು ಸವಾಲು ಎದುರಾಗುತ್ತವೆ. ಜಾತಿಯ ಸಮಸ್ಯೆ, ವರ್ಗದ ಸಮಸ್ಯೆ, ಹಣದ ಸಮಸ್ಯೆ, ಧರ್ಮದ ಸಮಸ್ಯೆಗಳು ಇಲ್ಲಿ ಎದುರಾಗುತ್ತವೆ. ಆದರೆ ಈ ಸವಾಲುಗಳನ್ನು ಎದುರಿಸಿ ಕೂಡ ವಿವಾಹಗಳು ಜರುಗುತ್ತವೆ. ಇವುಗಳನ್ನು ಕಾದಂಬರಿ ಎಳೆ ಎಳೆಯಾಗಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಕಾದಂಬರಿಯು ಸಮಾಜದಲ್ಲಿ ಕಂಡು ಬರುವ ವಿವಾಹಗಳಲ್ಲಿ ಅಂತರ್ಜಾತಿ ವಿವಾಹಗಳು ಗಂಡು ಹೆಣ್ಣಿನ ಅನ್ಯೋನ್ಯ ಜೀವನದಿಂದ ಮುಂದುವರೆಯುತ್ತವೆ. ಅವು ಸಮಾಜದ ಪ್ರತಿಷ್ಠಿತ ಕುಟುಂಬಗಳಲ್ಲಿ ಒಂದಾಗಿ ಬೆಳೆಯುತ್ತವೆ. ಜಾತಿ ಜಾತಿಗಳ ನಡುವಿನ ಸಂಪ್ರದಾಯಬದ್ಧ ವಿವಾಹಗಳು ಗಂಡ ಹೆಂಡತಿಯರ ನಡುವಣ ಸಾಮರಸ್ಯವಿಲ್ಲದ ಕಾರಣದಿಂದ ವಿಫಲಗೊಳ್ಳುತ್ತವೆ. ಇವನ್ನೆಲ್ಲ ತರತಮ್ಯವಿಲ್ಲದೆ ಕಾದಂಬರಿ ಚಿತ್ರಿಸುತ್ತದೆ. ಬಹಳ ಮಹತ್ವದ ಸಂಗತಿ ಎಂದರೆ ಜಾತಿಗಳನ್ನು ಬಿಟ್ಟು ಆದ ಮದುವೆಗಳಲ್ಲಿ ಹೆಣ್ಣು ಮತ್ತು ಗಂಡು ನಡುವಿನ ಅನ್ಯೋನ್ಯತೆಯನ್ನು ಪ್ರದರ್ಶಿಸುತ್ತವೆ. ಈ ಮೂಲಕ ಕಾದಂಬರಿಯು ಅಂತರ್ಜಾತಿ ವಿವಾಹದ ಮಾದರಿಯನ್ನು ಘನತೆಗೆ ಒಳಪಡಿಸುತ್ತದೆ.

ಈ ಕಾದಂಬರಿಯಲ್ಲಿ ಕಂಡು ಬರುವ ಕಮಲಯ್ಯ ಮತ್ತು ಸಾವಿತ್ರಿಯ ವಿವಾಹವು ಸಂಪ್ರದಾಯಬದ್ಧ ವಿವಾಹ. ಆದರೂ ಅವರ ಬಾಳಿನಲ್ಲಿ ಅನೇಕ ಸವಾಲುಗಳು ಬರುತ್ತವೆ. ಸಾವಿತ್ರಿಯು ತನ್ನ ಊರಿಗೆ ಮತ್ತು ಸಮುದಾಯಕ್ಕೆ ಪರಕೀಯನಾದ ಗಂಡ ಕಮಲಯ್ಯನನ್ನು ಹಂತ ಹಂತವಾಗಿ ಸ್ಥಳೀಕರಿಸುತ್ತ ಪರಿವರ್ತಿಸುತ್ತಾಳೆ. ಅವನನ್ನು ತನ್ನ ಊರಿನ ಸಮಾಜದಲ್ಲಿ ಒಬ್ಬನಾಗುವ ವ್ಯಕ್ತಿಯಾಗಿ ರೂಪಿಸುತ್ತಾಳೆ. ಇವರಿಬ್ಬರು ಸಂತಾನ ಭಾಗ್ಯಕ್ಕಾಗಿ ಮೊದಲ ಹಂತದಲ್ಲಿ ಬಹಳ ಕಷ್ಟಪಡುತ್ತಾರೆ. ಕೊನೆಗೆ ಇವರು ಧಾರ್ಮಿಕ ಆಚರಣೆಗಳನ್ನು ಮಾಡಿ ಸಂತಾನ ಪಡೆಯುತ್ತಾರೆ. ಇವರ ಕುಟುಂಬವು ಸಂಪ್ರದಾಯ ಮತ್ತು ಸಮುದಾಯದ ನಂಬಿಕೆಗಳಿಗೆ ಆದ್ಯತೆ ನೀಡುತ್ತದೆ. ಕುಟುಂಬವು ಉದ್ದಕ್ಕೂ ಕಷ್ಟಗಳನ್ನು ಎದುರಿಸುತ್ತದೆ. ಕಡೆಗೆ ಅದು ಒಂದು ಹಂತಕ್ಕೆ ಬಂದ ಬಳಿಕ ಸುಖೀ ಕುಟುಂಬವಾಗಿ ಬಾಳುವಂತೆ ಕಾದಂಬರಿ ಚಿತ್ರಿಸುತ್ತದೆ. ಈ ಮೂಲಕ ಕಾದಂಬರಿಯು ಸಂಪ್ರದಾಯದೊಳಗೆ ಅರ್ಥಪೂರ್ಣ ಬದುಕನ್ನು ಕಟ್ಟಿಕೊಳ್ಳಲು ಸಾಧ್ಯ ಎಂಬುದನ್ನು ಕಾಣಿಸುತ್ತದೆ.

ಇವರ ಮಕ್ಕಳಾದ ವಾಸುದೇವಾಚಾರು ಅವರ ಮಗಳಾದ ಸೋನಿಯ ವಿವಾಹವು ಸಂಪ್ರದಾಯ ಬದ್ಧತೆ ಮತ್ತು ಸ್ವಜಾತಿಯ ಚೌಕಟ್ಟಿನ ಒಳಗೇ ನಡೆಯುತ್ತದೆ. ಆದರೆ ಅವಳ ದಾಂಪತ್ಯ ಜೀವನವು ಅಷ್ಟೊಂದು ಯಶಸ್ವಿಯಾಗುವುದಿಲ್ಲ. ಅವರ ಬದುಕು ದುರಂತದಲ್ಲಿ ಮುಗಿಯುವುದನ್ನು ಕಾದಂಬರಿ ನಿರ್ಲಿಪ್ತವಾಗಿ ಚಿತ್ರಿಸುತ್ತದೆ. ವರದಕ್ಷಿಣೆಯ ಪೀಡೆಯು ಸೋನಿಯ ಬದುಕನ್ನು ಪತನಕ್ಕೆ ಈಡುಮಾಡುತ್ತದೆ. ಅವಳ ಜೀವನವನ್ನು ಹಣದ ಪಿಶಾಚಿಗಳಂತೆ ಇರುವ ಅವಳ ಗಂಡನ ಕಡೆಯುವರು ಹೊಸಕಿ ಹಾಕುತ್ತಾರೆ. ಸತಿಪತಿಯಿಬ್ಬರು ಸಪ್ತಪದಿ ತುಳಿದ ಮೂರನೇ ದಿವಸಕ್ಕೆ ಸೋನಿಯ ಮರಣ ಸಂಭವಿಸುತ್ತದೆ. ಇದರಿಂದ ದುಃಖತಪ್ತರಾದ ಸೋನಿಯ ತವರು ಮನೆಯ ದುಃಖವು ಬಹಳ ಆಳವಾಗಿದೆ. ಅವಳ ಕೊಲೆಯಿಂದ ರೊಚ್ಚಿಗೆದ್ದ ಯುವಕನಾದ ನಾರಾಯಣನು ಸೋನಿಯ ಅತ್ತೆಗೆ ಬಡಿದು ತನ್ನ ಕೋಪವನ್ನು ತೀರಿಸಿಕೊಳ್ಳುತ್ತಾನೆ. ಈ ದುರಂತ ಘಟನೆಯ ಎಲ್ಲ ವಿವರಗಳನ್ನು, ನಮ್ಮ ಸಮಾಜದಲ್ಲಿ ಇವೆಲ್ಲವೂ ಸಾಮಾನ್ಯ ಎಂಬ ದನಿಯಲ್ಲಿ ಕಾದಂಬರಿ ಚಿತ್ರಿಸುತ್ತದೆ. ಒಬ್ಬ ಎಳೆಯ ಹುಡುಗಿಯ ಬಾಳು ಅರಳುವ ಮುನ್ನವೇ ಬಾಡಿಹೋಗುವ ಘಟನೆಯು ಹೃದಯ ಕಲಕುವಂತಿದೆ. ಹೆಣ್ಣಿನ ಬಾಳಿನ ಸಫಲತೆ ಮತ್ತು ವಿಫಲತೆಗಳ ಅನೇಕ ಚಿತ್ರಗಳು ಈ ಕಾದಂಬರಿಯಲ್ಲಿವೆ.

ವಾಸಣ್ಣನ ಕುಟುಂಬದ ಮತ್ತೊಂದು ದಾಂಪತ್ಯ ಎಂದರೆ ಚಂಪಿ ಮತ್ತು ಹಣಮ್ಯಾನದು. ಇವರ ವಿವಾಹವನ್ನು ಕಾದಂಬರಿಯು ಬೇರೆ ಬಗೆಯಲ್ಲಿ ತರುತ್ತದೆ. ಚಂಪಿಯನ್ನು ವಾಸಣ್ಣನ ಮನೆಯಲ್ಲಿ ಮನೆಯ ಮಗನಂತೆ ಬೆಳೆದ ನಾರಾಯಣನಿಗೆ ಕೊಟ್ಟು ವಿವಾಹ ಮಾಡುವ ಯೋಜನೆಯು ಮೊದಲಿಗೆ ಇರುತ್ತದೆ. ಮದುವೆಯ ಮಾತುಕತೆ ಮುಗಿದ ಮೇಲೆ ತಿಪ್ಪಕ್ಕ ನಾರಾಯಣನ ಜಾತಿಯ ಬಗ್ಗೆ ಪ್ರಶ್ನೆಯನ್ನು ಎತ್ತಿ ವಿವಾಹದ ನಡುವೆ ಬಿರುಕನ್ನುಂಟು ಮಾಡುತ್ತಾಳೆ. ಅವರ ಲಗ್ನವು ಮುರಿದುಬಿದ್ದ ಬಳಿಕ ಚಂಪಿಯನ್ನು ವೆಂಕಣ್ಣನ ಎರಡನೇ ಮಗ ಹಣಮ್ಯಾನಿಗೆ ಕೊಟ್ಟು ವಿವಾಹ ಮಾಡಿಸುತ್ತಾಳೆ. ಈ ವಿವಾಹದ ಹಿಂದೆ ಅತ್ಯಂತ ಸಂಪ್ರದಾಯವಾದಿಯಾದ ಅಂಬಕ್ಕನ ಕೈವಾಡವಿದೆ ಎಂದು ಕಾದಂಬರಿ ಅನೇಕ ಬಗೆಯಲ್ಲಿ ಸೂಚಿಸುತ್ತದೆ. ಇದರಿಂದ ನಾರಾಯಣನಿಗೆ ಮುಜುಗರವಾಗುತ್ತದೆ. ಅವನು ನೊಂದುಕೊಳ್ಳುತ್ತಾನೆ. ಅವನು ಇಡೀ ಜಾತಿಯ ಆಧಾರದಲ್ಲಿ ನಡೆಯುವ ಈ ವಿವಾಹಗಳನ್ನೇ ತಿರಸ್ಕರಿಸುತ್ತಾನೆ. ಬದಲಿಗೆ ಅವನು ತಾನೇ ತನಗೆ ಬೇಕಾದ ಹೆಣ್ಣನ್ನು ಕಂಡು ವರಿಸಿ ಕೈಹಿಡಿಯುತ್ತಾನೆ. ನಾರಾಯಣನು ಇಲ್ಲಿ ಜಾತಿಯ ಆಚೆ ಹೋಗಿ ಹೆಣ್ಣನ್ನು ವರಿಸುತ್ತಾನೆ. ಅವರ ದಾಂಪತ್ಯವು ಅತ್ಯಂತ ಉನ್ನತವಾಗಿ ರೂಪುಗೊಳ್ಳುತ್ತದೆ. ಇದನ್ನು ಕಾದಂಬರಿಯು ವಾಸಣ್ಣನು ನಾರಾಯಣನ ಮನೆಗೆ ಹೋದ ಪ್ರಸಂಗದಲ್ಲಿ ಕಾಣಿಸುತ್ತದೆ. ಹಣಮ್ಯಾ ಮತ್ತು

ಚಂಪಿಯ ವಿವಾಹದ ನಡುವೆ ವರದಕ್ಷಿಣೆ ಪ್ರಸ್ತಾಪ ಬಂದಾಗ, ತಿಪ್ಪಕ್ಕನ ಕಣ್ಣೀರು ಮತ್ತು ಅವಳ ಮಾತುಗಳು ವಾಸಣ್ಣನ ಮನಸ್ಸನ್ನು ಕರಗುವಂತೆ ಮಾಡುತ್ತವೆ. ಇವಳ ಕಣ್ಣಿರಿಗೆ ಕರಗಿಹೋದ ವಾಸುದೇವಾಚಾರ್‌ಅವರಿಬ್ಬರ ವಿವಾಹವನ್ನು ಸುಸೂತ್ರವಾಗಿ ಅವನು ನಡೆಸಿಕೊಡುತ್ತಾನೆ. ಇಲ್ಲಿ ಕಾದಂಬರಿ ವಾಸಣ್ಣನ ತ್ಯಾಗ ತಾಳ್ಮೆ ಸಹನೆ ಮುಂತಾದ ಆದರ್ಶಗುಣಗಳನ್ನು ಎತ್ತಿಹಿಡಿಯುತ್ತದೆ. ಆದರೆ ಇದೇ ಸಹನೆಯ ವಾಸಣ್ಣನು ನಾರಾಯಣನಿಗೆ ಜಾತಿಯ ಕಾರಣಕೊಟ್ಟು ಲಗ್ನಮಾಡಲು ನಿರಾಕರಣೆ ಮಾಡುವಾಗ, ಅದನ್ನು ಪ್ರತಿಭಟಿಸದೆ ನಿರ್ಲಿಪ್ತವಾಗಿ ಉಳಿಯುತ್ತಾನೆ. ಇಲ್ಲಿನ ಪಾತ್ರಗಳು ಜಾತಿಯ ಕಟ್ಟನ್ನು ಮುರಿದು ದೊಡ್ಡ ಕ್ರಾಂತಿಯನ್ನು ಮಾಡುವುದಿಲ್ಲ. ಆದರೆ ಸಂಪ್ರದಾಯದ ಒಳಗೇ ಅವು ಅರ್ಥಪೂರ್ಣವಾದ ಬದುಕನ್ನು ಮಾಡಲು ಯತ್ನಿಸುತ್ತವೆ. ಅದರಲ್ಲಿ ಸೆಣಸುತ್ತವೆ. ಸೋಲುತ್ತವೆ. ಸಾಯುತ್ತವೆ. ಗೆಲ್ಲುತ್ತವೆ.

ಬೋಧ ಮತ್ತು ಸರಸ್ವತಿಯ ವಿವಾಹ ಜೀವನವು ಇಡೀ ಕಾದಂಬರಿಯಲ್ಲೇ ಅತ್ಯಂತ ವಿಷಾದಕರವಾದುದು. ಅದೊಂದು ವಿಫಲ ದಾಂಪತ್ಯ. ಬೋಧನು ಕಾದಂಬರಿಯಲ್ಲಿ ರಸಿಕ ಯುವಕನಂತೆ ಕಾಣಿಸಿಕೊಳ್ಳುತ್ತಾನೆ. ಅವನು ಪೋಲಿತನದಿಂದ ತನ್ನ ಸ್ವಭಾವವನ್ನು ತೋರಿಸುತ್ತಾನೆ. ಆಗ ಅವನಿಗೆ ಬೇಗ ಮದುವೆ ಮಾಡಬೇಕೆಂದು ಕುಟುಂಬದವರು ನಿರ್ಧರಿಸುತ್ತಾರೆ. ಅವನ ಹೆಂಡತಿಯಾಗಿ ಬರುವವಳು ಸರಸ್ವತಿ. ಈ ಸರಸ್ವತಿಯು ಕಾದಂಬರಿಯಲ್ಲಿ ಆದರ್ಶವಾದ ಗೃಹಿಣಿಯಾಗಿ ಕಾಣಿಸಿಕೊಳ್ಳುತ್ತಾಳೆ. ನೋವುಗಳನ್ನು ಸಹಿಸಿಕೊಂಡು ಅನ್ಯೋನ್ಯವಾಗಿ ಜೀವನವನ್ನು ತೂಗಿಸಿಕೊಂಡು ಬರುತ್ತಾಳೆ. ಒಬ್ಬ ಮುಗ್ಧ ಹೆಂಗಸಾಗಿ ತನ್ನ ಗಂಡನ ನಿತ್ಯದ ದಬ್ಬಾಳಿಕೆಯನ್ನು ಸಹಿಸುತ್ತಾಳೆ. ಊರಿನಲ್ಲಿ ತಮ್ಮ ಕುಟುಂಬದ ಮರ್ಯಾದೆಯನ್ನು ಕಾಯ್ದುಕೊಂಡು ಮನಸ್ಸಿಗೆ ನೆಮ್ಮದಿ ಇರದೆ ಶೋಚನೀಯವಾಗಿ ಬದುಕುತಾಳೆ. ಅವಳ ಪಾತ್ರವನ್ನು ಕಾದಂಬರಿ ತುಂಬ ಘನತೆಯಿಂದ ತರುತ್ತದೆ. ಈ ಸರಸ್ವತಿಯು ಕೆಟ್ಟಗಂಡನ ಕೈಹಿಡಿದು ನರಳುವ ಕಾರಂತರ 'ಮರಳಿ ಮಣ್ಣಿಗೆ'ಯ ಲಚ್ಚನ ಮಡದಿಯನ್ನು ನೆನಪಿಸುತ್ತಾಳೆ. ವಿವಾಹ ಇವಳಿಗೆ ಪವಿತ್ರ ಬಂಧನವಾಗಿರದೆ, ಅವಳನ್ನು ಕುಟುಂಬ ಎಂಬ ಕೋಟೆಯಲ್ಲಿ ಬಂಧಿಯಾಗುತ್ತದೆ.

ಇವರಿಗೆಲ್ಲ ಹೋಲಿಸಿದರೆ ಕಾದಂಬರಿಯಲ್ಲಿ ವಾಸುದೇವಾಚಾರು ಮತ್ತು ತುಳಸಕ್ಕನ ದಾಂಪತ್ಯ ಜೀವನವು ಹೆಚ್ಚು ಆದರ್ಶಮಯವಾಗಿದೆ. ಸಹನೆ, ತಾಳ್ಮೆ ಪ್ರೀತಿ ಇವೆ ಮುಂತಾದ ಆದರ್ಶ ಗುಣಗಳು ಇವರಿಬ್ಬರಲ್ಲಿ ಕಂಡು ಬರುತ್ತವೆ. ಇವರಿಬ್ಬರ ಪ್ರೀತಿ ಅಮೋಘವಾದದ್ದು, ಕುಟುಂಬದಲ್ಲಿ ಎಷ್ಟೇ ಕಷ್ಟ ನೋವುಗಳಿದ್ದರೂ ಅದನ್ನೆಲ್ಲಾ ಸಹಿಸಿಕೊಂಡು ಅನ್ಯೋನ್ಯವಾಗಿ

ಇವರು ಕುಟುಂಬದ ಹಿರಿಯರಾಗಿ ಇಡೀ ಸದಸ್ಯರನ್ನು ಸಂಭಾಳಿಸುತ್ತಾರೆ. ಒಂದು ಬಾರಿ ವಾಸುದೇವಾಚಾರ್ ಅವರು ಎರಡು ತಿಂಗಳು ತುಳಸಕ್ಕನನ್ನು ಅಗಲಿದ ಬಳಿಕ ಕಂಡಾಗ, ತುಳ'ಸಕ್ಕ ಎರಡು ಕಣ್ಣುಗಳಿಂದ ನೀರು ಹರಿಯುತ್ತದೆ. ಈ ಬಗೆಯ ಸಣ್ಣಪುಟ್ಟ ವಿವರಗಳ ಮೂಲಕ ಇವರಿಬ್ಬರ ದಾಂಪತ್ಯದ ಘನತೆ ಮತ್ತು ಪ್ರೀತಿಯನ್ನು ಕಾದಂಬರಿ ಓದುಗರ ಗಮನಕ್ಕೆ ತರುತ್ತದೆ, ಇವರ ದಾಂಪತ್ಯವು ಕುಟುಂಬದ ಎಲ್ಲ ದಾಂಪತ್ಯಗಳಿಗೆ ಒಂದು ಮಾದರಿಯಾಗಿ ನಿಲ್ಲುವಂತೆ ಕಾದಂಬರಿಯ ವಿನ್ಯಾಸವಿದೆ.

ಇವುಗಳಲ್ಲೆಲ್ಲ ನಾರಾಯಣ ಮತ್ತು ಮೈನಾಳ ವಿವಾಹ ಜೀವನವೇ ವಿಶಿಷ್ಟವಾದುದು. ಜಾತಿಯಲ್ಲಿ ಬ್ರಾಹ್ಮಣನಲ್ಲ ಎಂದು ಮನೆಯಿಂದ ತಿರಸ್ಕೃತನಾದ ನಾರಾಯಣ ವಿಷಾದದಲ್ಲಿ ಮತ್ತು ಒಂದು ಬಗೆಯ ಛಲದಲ್ಲಿ ಹೊಸಬದುಕನ್ನು ಕಟ್ಟಿಕೊಳ್ಳಲು ನಿರ್ಧರಿಸುತ್ತಾನೆ. ನವಲಗುಂದಕ್ಕೆ ಬಂದ ನಾಟಕದ ಕಂಪನಿಯ ಹುಡುಗಿ ಮೈನಾಳನ್ನು ಅವನು ಪ್ರೀತಿಸುತ್ತಾನೆ. ಅವಳನ್ನು ಅಪಹರಿಸಿಕೊಂಡು ಹೋಗಿ ಸಂಗಾತಿಯಾಗಿ ಮಾಡಿಕೊಳ್ಳುತ್ತಾನೆ. ನಾರಾಯಣ ಎಲ್ಲ ಜಾತಿಯ ಸಂಪ್ರದಾಯಗಳ ವಿರುದ್ಧ ನಿಂತು ಅಂತರ್ಜಾತಿ ವಿವಾಹವಾಗುತ್ತಾನೆ. ಒಳ್ಳೆಯ ಬಾಳನ್ನು ಬಾಳುವ ಮೂಲಕ, ತನನ್ನು ಜಾತಿಕಾರಣದಿಂದ ಅಪಮಾನಿಸಿದ ವ್ಯವಸ್ಥೆಗೆ ಒಂದು ಉತ್ತರವಾಗುತ್ತಾನೆ. ಕಾದಂಬರಿಯು ಜಾತಿಯ ಒಳಗೇ ಲಗ್ನವಾದರೂ ವಿಫಲ ದಾಂಪತ್ಯ ನಡೆಸುವ ಸೋನಿ ಮತ್ತು ಅವಳ ಗಂಡ, ಸರಸ್ವತಿ ಮತ್ತು ಬೋಧರ ಜೋಡಿಗಳ ಮುಂದೆ, ಜಾತಿಯಾಚೆ ತನ್ನ ವಿವಾಹ ಜೀವನ ಕಟ್ಟಿಕೊಳ್ಳುವ ನಾರಾಯಣ ಮತ್ತು ಮೈನಾಳ ಬದುಕನ್ನು ಇಡುತ್ತದೆ. ಹೀಗೆ ಇಡುವ ಮೂಲಕ ಅದು ಯಾವುದು ನಿಜವಾದ ವಿವಾಹ ಮತ್ತು ನಿಜವಾದ ಜೀವನ ಯಾವುದು ಎಂಬುದನ್ನು ಸೂಚ್ಯವಾಗಿ ಓದುಗರಿಗೆ ಧ್ವನಿಸುತ್ತದೆ.

ನಾರಾಯಣ ಕಾದಂಬರಿಯ ಉದ್ದಕ್ಕೂ ಸಂಪ್ರದಾಯವಾದಿಗಳೂ ಮಡಿಮೈಲಿಗೆಗಳಲ್ಲಿ ಮನುಷ್ಯರನ್ನು ನೋಯಿಸುವವರೂ ಆದ ಬ್ರಾಹ್ಮಣರ ಆಚರಣೆಗಳ ವಿರುದ್ದ ಒಂದು ಬಂಡಾಯದಂತೆ ರೂಪುಗೊಳ್ಳುತ್ತಾನೆ. ಅವನು ಮೊದಲಿಂದಲೂ ಬ್ರಾಹ್ಮಣ್ಯದ ಚೌಕಟ್ಟಿನ ಆಚೆಯೇ ಹೋಗಿ ಬೆಳೆಯುವುದನ್ನು ಕಾದಂಬರಿ ಕಾಣಿಸುತ್ತಾ ಹೋಗುತ್ತದೆ. ಅವನು ರಣಹಲಿಗೆ ಬಡಿಯುವುದು, ತಿಪ್ಪಯ್ಯನ ಮಠದ ಪಟ ಏರಿಸುವುದು, ರೈತರ ಜೊತೆ ಹೆಚ್ಚು ಕಾಲ ಕಳೆಯುವುದು, ಕೆಳವರ್ಗದ ಹುಡುಗರ ಜೊತೆ ಈಸುವುದು, ಇವೆಲ್ಲಾ ವೈದಿಕ ಬ್ರಾಹ್ಮಣರ ಮನೆಯ ಹುಡುಗನ ಲಕ್ಷಣಗಳಲ್ಲ. ಆದರೂ ಸಹ ಅವನ ಈ ಬಗೆಯ ಸಾಹಸಗಳನ್ನು ಕಾದಂಬರಿಯು ಬಹಳ ಉತ್ಸಾಹದಿಂದ ತರುತ್ತದೆ. ಇದರ ಹಿಂದೆ ಜಾತಿಯತೆಯ ಒಳಗೇ ರೂಪುಗೊಳ್ಳುವ ಮನುಷ್ಯ ಸಂಬಂದಗಳನ್ನು ಮತ್ತು ವೈವಾಹಿಕ

ಸಂಬಂಧಗಳನ್ನು ಮೌಲ್ಯಮಾಪನ ಮಾಡುವ ಉದ್ದೇಶವಿದೆ ಎಂದು ತಿಳಿಯಬಹುದು. ನಾರಾಯಣನು ಜಾತಿಯ ಸಂಕುಚಿತತೆಯಿಂದ ತನ್ನ ಅಪಮಾನ ಮಾಡಿದ ತಿಪ್ಪಕ್ಕನ ಒಂದೊಂದು ಮಾತ'ನ್ನು ಸವಾಲಾಗಿ ಸ್ವೀಕರಿಸಿ ಪಂತರ ಕುಟುಂಬದ ವಿರುದ್ಧವಾಗಿ ಜೀವಿಸುವುದನ್ನ ಕಾಣಬಹುದು. ಅವನ ದಾಂಪತ್ಯ ಮಾತ್ರವಲ್ಲ, ಮನುಷ್ಯನಾಗಿ ಕೂಡ ನಾರಾಯಣನು ಅತ್ಯಂತ ಘನತೆಯ ವ್ಯಕ್ತಿಯಾಗಿ ಎತ್ತರಕ್ಕೆ ಬೆಳೆಯುವುದನ್ನ ಕಾಣಬಹುದು. ಸಂಪ್ರದಾಯವಾದಿಗಳು ಇವನ ದಾಂಪತ್ಯದ ಮುಂದೆ ಕುಬ್ಜನಾಗುವುದನ್ನು ಕಾದಂಬರಿ ನಿಷ್ಠುರವಾಗಿ ತರುತ್ತದೆ.

ಹೀಗೆ ಈ ಕಾದಂಬರಿಯಲ್ಲಿ ಅನೇಕ ಬಗೆಯ ದಾಂಪತ್ಯ ಜೀವನಗಳ ಚಿತ್ರಣವಿದೆ. ಒಂದೊಂದು ದಾಂಪತ್ಯವೂ ಒಂದೊಂದು ರೀತಿಯಲ್ಲಿ ಆರಂಭವಾಗಿ ಬೆಳೆದು ಒಂದೊಂದು ರೀತಿಯ ಸಂದೇಶವನ್ನು ಜಗತ್ತಿಗೆ ಸಾರಿ ಮುಗಿಯುತ್ತದೆ. ಇವುಗಳಲ್ಲಿ ಅಂತರ್ಜಾತಿ ವಿವಾಹಗಳು ಜಾತಿಸಮಾಜದಲ್ಲಿ ಅತ್ಯಂತ ಘನತೆಯ ಸಂಗತಿಯಾಗಿ ಕಾಣಿಸುವಲ್ಲಿ ಕಾದಂಬರಿಯ ಉದ್ದೇಶವನ್ನು ಸ್ಪಷ್ಟವಾಗಿದೆ.

# ಅಧ್ಯಾಯ-೩. ರಾಜಕೀಯ ವಿಶ್ಲೇಷಣೆ

೩.೧- ನರಗುಂದದ ದೊರೆಗಳು

೩.೨- ಬ್ರಿಟಿಷರ ಆಳ್ವಿಕೆ

೩.೩- ಸ್ವಾತಂತ್ರ್ಯ ಚಳುವಳಿಯ ಸ್ವರೂಪ

## ಅಧ್ಯಾಯ ೩

## 'ಹಳ್ಳಬಂತು ಹಳ್ಳ' ಕಾದಂಬರಿಯ ರಾಜಕೀಯ ವಿಶ್ಲೇಷಣೆ

ಈ ಅಧ್ಯಾಯದಲ್ಲಿ ಕಾದಂಬರಿಯು ಚಾರಿತ್ರಿಕವಾಗಿ ಒಳಗೊಂಡಿರುವ ವಿದ್ಯಮಾನಗಳನ್ನು ವಿಶ್ಲೇಷಿಸಲು ಯತ್ನಿಸಲಾಗುವುದು. ಕಾದಂಬರಿಯಲ್ಲಿರುವ ಕಥೆಯು ೧೮೫೭ರಿಂದ ೧೯೪೭ರ ತನಕ ಒಂದು ಶತಮಾನದ ಕಾಲಭಿತ್ತಿಯಲ್ಲಿ ಜರುಗುತ್ತದೆ. ಈ ಕಾಲಘಟ್ಟವು ಭಾರತದ ಸಮಾಜವು ರಾಜಕೀಯವಾಗಿ ಆರ್ಥಿಕವಾಗಿ ಸಾಮಾಜಿಕವಾಗಿ ಬಹಳ ತೀವ್ರವಾದ ಪಲ್ಲಟಗಳನ್ನು ಹೊಂದಿರುವಂತಹದ್ದು. ಭಾರತೀಯ ಸಮಾಜವು, ಬ್ರಿಟಿಶರ ರಾಜಕೀಯ ಆಡಳಿತೆಯ ಭಾಗವಾಗಿ ಬಂದ ವೈಚಾರಿಕತೆ, ಆಧುನಿಕತೆ, ಶಿಕ್ಷಣ, ವಿಜ್ಞಾನ ತಂತ್ರಜ್ಞಾನಗಳನ್ನು ಒಳಗೊಂಡು ತನ್ನ ಒಳಗೇ ಅನೇಕ ಚಲನೆಗಳನ್ನು ಪ್ರಕಟಿಸಿದ ಕಾಲಘಟ್ಟವಿದು. ಇಂತಹ ರಾಷ್ಟ್ರೀಯ ಅಂತಾರಾಷ್ಟ್ರೀಯವಾದ ಕಾಲಭಿತ್ತಿಯಲ್ಲಿ ಒಂದು ಪುಟ್ಟಹಳ್ಳಿಯಲ್ಲಿ ನಡೆಯುವ ಇಲ್ಲಿನ ಘಟನೆಗಳು ಬರುತ್ತವೆ. ಹಳ್ಳಿಯ ಬದುಕೇ ಬದಲಾಗುವಾಗ ವ್ಯಕ್ತಿಗಳ ಬದುಕೂ ಬದಲಾಗುತ್ತದೆ. ಬದಲಾದ ವ್ಯಕ್ತಿಗಳು ಈ ಸಮಾಜದ ಬದುಕನ್ನು ಬದಲಿಸಲು ಯತ್ನಿಸುತ್ತಾರೆ.

### ೩.೧. ನರಗುಂದದ ದೊರೆಗಳು

ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯು ರಾಜಕೀಯವಾಗಿ ೧೮೫೭ರ ಸಿಪಾಯಿ ದಂಗೆಯಿಂದ ಹಿಡಿದು ೧೯೪೮ರ ಗಾಂಧೀಜಿಯ ಸಾವಿನವರೆಗಿನ ಒಂದು ಶತಮಾನದ ಕಥಾನಕವನ್ನು ಚಿತ್ರಿಸುತ್ತದೆ. ಈ ಕಾಲದ ಮುಖ್ಯ ರಾಜಕೀಯ ಸ್ಥಿತ್ಯಂತರಗಳನ್ನು ಅದರಲ್ಲೂ ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮವೆಂದು ಕರೆಯಲಾಗುವ, ಸಿಪಾಯಿ ದಂಗೆಯ ಇತಿಹಾಸವನ್ನು ಒಳಗೊಂಡಿದೆ; ಈಸ್ಟ್ ಇಂಡಿಯಾ ಕಂಪನಿ ಸರ್ಕಾರದ ವಿರುದ್ಧ ಕಾನ್ಪುರದಲ್ಲಿ ದಂಗೆಯೆದ್ದ ನಾನಾ ಸಾಹೇಬ ಮತ್ತು ದಕ್ಷಿಣದ ನರಗುಂದದಲ್ಲಿ ಅವನ ಪೇಶ್ವೆಯಾಗಿದ್ದ ಬಾಬಾಸಾಹೇಬ ರಾಜಕೀಯ ಇತಿಹಾಸವನ್ನು ಕಾದಂಬರಿ ಒಳಗೊಂಡಿದೆ. ಪುಣೆಯ ಪೇಶ್ವೆಗಳಿಗೆ ಅಧೀನರಾಗಿದ್ದ ನರಗುಂದದ ಬಾಬಾಸಾಹೇಬನ ದಂಗೆಯನ್ನು ಸಹ ಇದು ಒಳಗೊಂಡಿದೆ.

ಬ್ರಿಟಿಷರು ಭಾರತಕ್ಕೆ ಬಂದಾಗಿನಿಂದ ಭಾರತದ ಸಾಹಿತ್ಯಿಕ ರಾಜಕೀಯ ಕ್ಷೇತ್ರದಲ್ಲಿ ಗಮನಾರ್ಹವಾದ ಬದಲಾವಣೆ ಗಳಾದವು. ಬ್ರಿಟಿಷರು ಆಕ್ರಮಣಕಾರಿ ನೀತಿಯನ್ನು ಕೈಗೊಂಡು ಭಾರತದ ಬೇರೆಬೇರೆ ಪ್ರಾಂತ್ಯಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡರು. ಉತ್ತರ ಭಾರತದಲ್ಲಿದ್ದ ನಾನಾ ಸಾಹೇಬನು ಬ್ರಿಟಿಷರನ್ನು ಎದುರಿಸಲು ಬೇಕಾದ ಸಹಾಯಕ್ಕಾಗಿ

ಇಬ್ಬರು ಸವಾರರನ್ನು ದಕ್ಷಿಣದ ನರಗುಂದಕ್ಕೆ ಕಳುಹಿಸುತ್ತಾನೆ. ಈ ಕುದುರೆ ಸವಾರರ ಆಗಮನದ ಮೂಲಕ ಕಾದಂಬರಿ ಆರಂಭವಾಗುತ್ತದೆ. ನವಲಗುಂದ ಹುಡುಗರು ಉತ್ತರದಲ್ಲಿರುವ ಮುಂಬೈಗೆ ಹೋಗಿ, ಅಲ್ಲಿ ಗಾಂಧಿಯವರ ಪ್ರೇರಣೆ ಪಡೆದು ಬ್ರಿಟಿಶರ ವಿರುದ್ಧ ಹೋರಾಟ ಮಾಡುವುದರಲ್ಲಿ ಮುಗಿಯುತ್ತದೆ. ಒಂದು ಬಗೆಯಲ್ಲಿ ಕಾದಂಬರಿಯು ಉತ್ತರದಿಂದ ಬರುವ ಮತ್ತು ದಕ್ಷಿಣದಿಂದ ಉತ್ತರಕ್ಕೆ ಹೋಗುವ ಹೋರಾಟಗಾರರ ಆಗಮನ ನಿರ್ಗಮನಗಳ ಚೌಕಟ್ಟಿನಿಂದ ಕೂಡಿದ. ಇದು ಈ ಸಾಮಾಜಿಕ ಕಾದಂಬರಿಯನ್ನು ಆವರಿಸಿಕೊಂಡಿರುವ ರಾಜಕೀಯ ಚೌಕಟ್ಟಾಗಿದೆ.

***"ದಡ್ಡತನ ಮಾಡೀರಿ... ಇವರನ ಹಿಡಿಯಾಕ ಹೋಗಬಾರದಿತ್ತು... ನಿಮಗೆ ತಿಳಿತ್ಯತೋ ಇಲ್ಲೋ... ಇವರು ನರಗುಂದ ಬಾಬಾಸಾಹೇಬನ ದಂಗೇದ ಮಂದಿ... ಹಿಡಿದ ಇಟ್ಟದ್ದೊಂದ ದಡ್ಡತನ... ಈಗ ಬಿಟ್ಟರ ಇನ್ನೊಂದ ದಡ್ಡತನ ಆಗತೇತಿ. ಇವರು ನಾವು ಹಿಂತಲ್ಲೆ ಇದ್ದಿವಿ ಅಂದ್ರ ಇನ್ನೊಂದ ತ್ರಾಸ... ಇಬ್ಬರೂ ಹುಡುಗರು ಕಾಣತಾರ ಏನೇನು ಸಾಹಸಾ ಮಾಡಾಕ ಹೊಂಟಾರೋ ಏನೊ.. ಇವರ ಮ್ಯಾಗ ಕಡಕ ನಿಗಾ ಇಡರಿ. ಜ್ವಾಕಿ.. ಅವರನ ಊರಾಗ ಹೋಗಾಕ ಬಿಡಬ್ಯಾಡ್ರೀ.."*** (ಪು.ಸಂ.೬) ಇಲ್ಲಿ ನರಗುಂದದ ದೊರೆಗಳ ಆಡಳಿತ ವೈಖರಿಯ ಬಗೆ ತಿಳಿಯಬಹುದು. ಬ್ರಿಟಿಷರಿಂದ ಮೊದಲೇ ಸಮಸ್ಯೆಗೆ ಸಿಕ್ಕಿಕೊಂಡ ಇವರು ಆ ಇಬ್ಬರು ಯೋಧರನ್ನು ಹಿಡಿದು ಮತ್ತೊಂದು ಸಮಸ್ಯೆಗೆ ಸಿಲುಕಿರುವುದನ್ನು ಕಾಣಬಹುದು. ಹೀಗೆ ನರಗುಂದದ ದೊರೆಗಳು ಸಮಸ್ಯೆಗಳಲ್ಲಿ ಸಿಕ್ಕಿ ಸುಳಿಯಲ್ಲಿ ತೊಳಲಾಡುವುದನ್ನು ಕಾದಂಬರಿ ಮನೋಜ್ಞಾವಾಗಿ ಚಿತ್ರಿಸುತ್ತದೆ.

ಈ ಕಾದಂಬರಿಯ ಮೊದಲ ಅಧ್ಯಾಯದಲ್ಲಿ ಸಿಪಾಯಿದಂಗೆಯ ಪೂರ್ವ ಇತಿಹಾಸವನ್ನು ಒಳಗೊಂಡಿದೆ. ಐದು ಮತ್ತು ಆರನೇ ಅಧ್ಯಾಯದಲ್ಲಿ ಬ್ರಿಟಿಶರ ವಿರುದ್ಧ ಕರ್ನಾಟಕದ ಒಂದು ಪುಟ್ಟ ಊರಿನಲ್ಲಿ ನಡೆಯುವ ಸ್ವಾತಂತ್ರ್ಯ ಸಂಗ್ರಾಮವನ್ನು ಒಳಗೊಂಡಿದೆ. ಹಳ್ಳವು ಈ ಕಾದಂಬರಿಯಲ್ಲಿ ಒಂದು ಪ್ರತಿಮೆ ಆಗಿದೆ. ಹಳ್ಳದ ನೀರಿನಂತೆ ಇಲ್ಲಿನ ಜನರ ಬದುಕು ಹರಿಯುತ್ತದೆ. ರಾಜಕೀಯ ಬದುಕು ಕೂಡ ಹರಿಯುತ್ತದೆ. ಹೋರಾಟದ ನದಿಗಳು ಹರಿಯುತ್ತವೆ. ಆದ್ದರಿಂದ ಹಳ್ಳವು ಕಾದಂಬರಿಯಲ್ಲಿ ಸಾಂಕೇತಿಕ ಅರ್ಥವನ್ನು ಹೊಂದಿದೆ.

ನರಗುಂದದ ದೊರೆಗಳು ಬ್ರಿಟಿಷರ ಆಕ್ರಮಣಕಾರಿ ನೀತಿಗೆ ಕಡಿವಾಣ ಹಾಕಬೇಕೆಂದು ಕಂಪನಿ ಸರ್ಕಾರದ ವಿರುದ್ಧ ದಂಗೆ ಏಳುತ್ತಾರೆ. ಬ್ರಿಟಿಷರ ಕಲೆಕ್ಟರ್ ಓಜಿಲ್ವೆ ಎಂಬುವನು ಇವರ ದಂಗೆಯ ವಿರುದ್ಧ ಆಕ್ರಮಣಕಾರಿ ನೀತಿ ಕೈಗೊಂಡು ನರಗುಂದವನ್ನು ಸೋಲಿಸುತ್ತಾನೆ. ನರಗುಂದದ ದೊರೆ ಸೋತು ಓಡಿಹೋದಾಗಿನಿಂದ ಆ ಪ್ರದೇಶದ ಜನರಲ್ಲಿ ಶೋಚನೀಯ ಪರಿಸ್ಥಿತಿ ಉಂಟಾಗುತ್ತದೆ; ಯಾರೂ ಊರಿನಿಂದ ಹೊರಗಡೆ ಬರದ ಹಾಗೆ

ಒಂದು ರೀತಿಯ ಉದ್ವಿಗ್ನ ಪರಿಸ್ಥಿತಿ ಉಂಟಾಗುತ್ತದೆ. ಕಾದಂಬರಿಯ ಕೊನೆಯಲ್ಲಿ, ಇದೇ ಬ್ರಿಟಿಶ್ ಪೋಲಿಸು, ನವಲಗುಂದದಲ್ಲಿ ಹೋರಾಟಗಾರರನ್ನು ಹಿಡಿಯಲೆಂದು ಬಂದು ಊರನ್ನು ಆಕ್ರಮಿಸಿಕೊಳ್ಳುವ ಘಟನೆ ಬರುತ್ತದೆ. ಹೀಗೆ ಕಾದಂಬರಿ ಆರಂಭ ಮತ್ತು ಕೊನೆಯಲ್ಲಿ ಆಕ್ರಮಣ ಮತ್ತು ಅದಕ್ಕೆ ಹುಟ್ಟುವ ಪ್ರತಿರೋಧಗಳ ಘಟನೆಗಳು ಪೀಠಿಕೆ ಮತ್ತು ಉಪಸಂಹಾರಗಳಂತೆ ಬರುತ್ತವೆ.

ಕಾದಂಬರಿಯು ಉತ್ತರದ ಕಾನ್ಪುರದಿಂದ ದಕ್ಷಿಣದ ಧಾರವಾಡದ ನರಗುಂದಕ್ಕೆ ಸಂಬಂಧ ಕಲ್ಪಿಸಿವು ಮೂಲಕ ಆರಂಭವಾಗುತ್ತದೆ. ಅದು ನವಲುಗುಂದಕ್ಕೂ ಮುಂಬೈಗೂ ಸಂಬಂಧ ಕಲ್ಪಿಸುವ ಮೂಲಕ ಮುಕ್ತಾಯವಾಗುತ್ತದೆ. ಹೀಗೆ ಅತ್ಯಂತ ಸ್ಥಳೀಯ ಎನ್ನಬಹುದಾದ, ಊರಿನ ಕತೆಯನ್ನು ಒಳಗೊಂಡಿದ್ದೂ, ಕಾದಂಬರಿಗೆ ರಾಷ್ಟ್ರೀಯ ಎನ್ನಬಹುದಾದ ಒಂದು ಭಿತ್ತಿಯಿದೆ.

ಉತ್ತರ ಭಾರತದಿಂದ ಬಂದಂತಹ ಕುದುರೆ ಸವಾರರು ನವಲಗುಂದದ ಸೈನಿಕರಿಗೆ ಸೆರೆಸಿಕ್ಕುತ್ತಾರೆ. ಅವರು ಎಷ್ಟೇ ಹಿಂಸೆ ನೀಡಿದರೂ ತಮ್ಮ ಗುಟ್ಟನ್ನು ಹೊರಬಿಡುವುದಿಲ್ಲ. ಇದು ಅವರ ಹೋರಾಟದ ಬದ್ಧತೆಯನ್ನು ಸೂಚಿಸುತ್ತದೆ. ಇಂತಹುದೇ ಬದ್ಧತೆಯನ್ನು ನವಲಗುಂದದ ಹೋರಾಟಗಾರರು ಒಂದು ಶತಮಾನದ ಬಳಿಕ ತೋರುತ್ತಾರೆ. ನರಗುಂದದಲ್ಲಿ ಬಾಬಾಸಾಹೇಬನು ಪೊಲಿಟಿಕಲ್ ಏಜೆಂಟ್ ಮ್ಯಾನ್ಸ್ ಎಂಬುವನನ್ನು ಕೊಂದು ಕಂಪನಿಯ ಸರ್ಕಾರದ ವಿರುದ್ಧ ಯುದ್ಧ ಸಾರುತ್ತಾನೆ. ಅತ್ತ ಧಾರವಾಡದಿಂದ ಇಂಗ್ಲೀಷರ ದಂಡು ನರಗುಂದಕ್ಕೆ ಮುತ್ತಿಗೆ ಹಾಕುವ ಮತ್ತು ಬಾಬಾಸಾಹೇಬ-ಬ್ರಿಟಿಷರ ನಡುವೆ ಘೋರ ಯುದ್ಧನಡೆಯುವ ಘಟನೆಗಳು ಕಾದಂಬರಿ ಆರಂಭದಲ್ಲಿವೆ. ಮುಂದೆ ಈ ರಾಜಕೀಯ ಸಂಘರ್ಷಗಳು ವಾಸಣ್ಣನ ಕುಟುಂಬದ ಸಂಘರ್ಷಗಳ ರೂಪದಲ್ಲಿ ಮುಂದುವರೆಯುತ್ತವೆ. ನಾರಾಯಣ, ರುಕುಮಾ ಮುಂತಾದವರು ತಮ್ಮ ವ್ಯಕ್ತಿತ್ವವನ್ನು ಕಟ್ಟಿಕೊಳ್ಳಲು ವೈಯಕ್ತಿಕವಾಗಿ ಸಂಘರ್ಷ ಮಾಡುತ್ತಾರೆ.

ಹೀಗೆ ಸಂಘರ್ಷ ಹೋರಾಟವು ಕಾದಂಬರಿಯ ಮುಖ್ಯ ಆಶಯವಾಗಿದೆ. ಇಲ್ಲಿ ನಡೆಯುವ ರಾಜಕೀಯ ಸಂಘರ್ಷಗಳಿಗೂ, ಸಾಮಾಜಿಕ ಸಂಘರ್ಷಗಳಿಗೂ, ವೈಯಕ್ತಿಕ ಸಂಘರ್ಷಗಳಿಗೂ ಆಂತರಿಕ ಸಂಬಂಧವಿದೆ.

ಈ ಕಾದಂಬರಿಯಲ್ಲಿ ತಮ್ಮ ಸ್ವಂತ ಸ್ವಾರ್ಥಕ್ಕಾಗಿ ಕುಟುಂಬದ ಅಥವಾ ಊರಿನ ಹಿತವನ್ನು ಬಲಿಕೊಡುವ ಬೋಧರಾಯನಂತಹ ಪಾತ್ರಗಳೂ ಬರುತ್ತವೆ. ಇದೇ ರೀತಿಯಲ್ಲಿ ಊರಿನ ನಾಡಿನ ಹಿತಕ್ಕಾಗಿ ತಮ್ಮ ಪ್ರಾಣವನ್ನು ಕಳೆದುಕೊಳ್ಳುವ ಪಾತ್ರಗಳೂ ಬರುತ್ತವೆ.

*"ದಿನಾಲೂ ಒಬ್ಬಿಬ್ಬರನ್ನು ವೆಂಕಟೇಶ ದೇವರ ಗುಡಿಯ ಬಯಲಿನಲ್ಲಿ ನೇಣು ಗಂಬಕ್ಕೆ ತೂಗು ಹಾಕುತ್ತಿದ್ದರಂತೆ... ಶವ ಸಂಸ್ಕಾರಕ್ಕಂತ ಬಂದವರನ್ನ ಸಹಿತ ಹಿಡಿದು ಥಳಿಸುತ್ತಿದ್ದರಂತೆ... ಪಟ್ಟೇಗಾರ ಓಣಿಯೊಳಗೆ ಪ್ರತಿಮನೆಗೆ ಒಬ್ಬೊಬ್ಬರಂತೆ ಗಂಡಸರನ್ನ ಒತ್ತೆಯಾಳಾಗಿ ಇಟ್ಟು ಕೊಂಡಿದ್ದರಂತೆ... ದಿನ ಬಿಟ್ಟು ದಿನ ಸಂಕವ್ವನ ಬಾವಿಯಲ್ಲಿ ಒಂದೆರಡು ಯಾರಯಾರದೋ ಅಪರಿಚಿತರ ಹೆಣ ತೇಲುತ್ತಿದ್ದವಂತೆ..."* (ಪು.ಸಂ. ೮) ನರಗುಂದದ ಬಳಿ ವೆಂಕಟೇಶ್ವರ ದೇವರ ಗುಡಿಯ ಬಯಲಿನಲ್ಲಿ ನೇಣುಗಂಬಕ್ಕೆ ತೂಗು ಹಾಕುವ ಪ್ರಸಂಗವು ಬಹಳ ಭಾವನಾತ್ಮಕವಾಗಿದೆ. ವಸಾಹತುಶಾಹಿಗಳಾದ ಬ್ರಿಟಿಶರು ತಮ್ಮ ವಿರುದ್ಧ ದಂಗೆಯೆದ್ದ ಜನರನ್ನು ಭೀಕರವಾಗಿ ಕೊಲ್ಲುವ ಘಟನೆಗಳು ಕಾದಂಬರಿಯಲ್ಲಿ ಅನೇಕ ಹುತಾತ್ಮರನ್ನು ಸೃಷ್ಟಿಮಾಡಿವೆ. ವಾಸಣ್ಣನ ಮನೆಯ ಹುಡುಗನು ಬ್ರಿಟಿಶರ ಪೋಲಿಸರ ಗುಂಡಿಗೆ ಬಲಿಯಾಗುತ್ತಾನೆ. ಆದ್ದರಿಂದ ನರಗುಂದದಲ್ಲಿ ನಡೆದ ಭಯಾನಕ ನರಮೇಧವು ಒಂದು ಶತಮಾನದ ಬಳಿಕ ಮತ್ತೆ ಅದರ ಪಕ್ಕದ ಊರಾದ ನವಲುಗುಂದದಲ್ಲಿ ಪುನರಾವೃತ್ತಿಯಾಗುತ್ತದೆ. ಈ ಎರಡು ಹೋರಾಟ ಮತ್ತು ವ್ಯವಸ್ಥೆಯ ಕ್ರೌರ್ಯಗಳನ್ನು ಕಾದಂಬರಿ ಚಿತ್ರಿಸುತ್ತದೆ. ನರಗುಂದದ ದೊರೆಗಳು ಬ್ರಿಟಿಷರ ಆಕ್ರಮಣಕಾರಿ ನೀತಿಯ ವಿರುದ್ಧ ಹೋರಾಟ ಆರಂಭಿಸಿದರೆ, ಮುಂದೆ ಒಂದು ಶತಮಾನದ ಬಳಿಕ ಸಾಮಾನ್ಯ ಜನ, ಈ ಹೋರಾಟವನ್ನು ಮುಂದುವರೆಸುತ್ತಾರೆ. ಹೀಗೆ ಮೇಲುನೋಟಕ್ಕೆ ಸಾಮಾಜಿಕ ಕಾದಂಬರಿ ಎಂದು ಅನಿಸುವ ಪ್ರಸ್ತುತ ಕಾದಂಬರಿಯು, ಆಳದಲ್ಲಿ ಒಂದು ರಾಜಕೀಯ ಕಾದಂಬರಿಯೂ ಆಗಿರುವುದು ತಿಳಿಯುತ್ತದೆ.

**೩.೩. ಬ್ರಿಟಿಷರ ಆಳ್ವಿಕೆಯ ಚಿತ್ರಗಳು**

ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಬ್ರಿಟಿಷರ ವಿರುದ್ಧ ನಡೆದ ಸ್ವಾತಂತ್ರ್ಯದ ಹೋರಾಟಗಳು ಮಾತ್ರ ಇಲ್ಲ. ಅವು ಬ್ರಿಟಿಶರಿಂದ ಭಾರತದ ಜೀವನದ ಮೇಲೆ ಪರಿಣಾಮ ಬೀರಿದ ಇತರೆ ಅನೇಕ ಅಂಶಗಳ ಚಿತ್ರಣವನ್ನೂ ಒಳಗೊಂಡಿದೆ. ಧಾರವಾಡದ ಸುತ್ತಲಿನ ಪ್ರದೇಶವಾದ ನರಗುಂದ, ನವಲಗುಂದ, ಯಮನೂರು, ಅಣ್ಣಿಗೇರಿ, ಕಾಲವಾಡ, ಬ್ಯಾಹಟ್ಟಿ, ಇನ್ನು ಮುಂತಾದ ಪ್ರದೇಶಗಳಲ್ಲಿ ಬ್ರಿಟಿಷರ ಆಳ್ವಿಕೆಯಿಂದ ಉದ್ವಿಗ್ನ ಪರಿಸ್ಥಿತಿ ಉಂಟಾಗುತ್ತದೆ. ಜನರು ಹಗಲು ಹೊತ್ತಲ್ಲೂ ಹೊರಬರದಷ್ಟು ಭಯ ಅತಂಕದ ಸನ್ನಿವೇಶ ಉಂಟಾಗುತ್ತದೆ. *"ಕೊಪ್ಪಲ ಹತ್ತಿರ ಮುಂಡರಗಿ ಭೀಮರಾಯ ಗುಂಡು ಹೊಡಕೊಂಡು ಸತ್ತಿದ್ದಾನಂತೆ.. ಹೆಮ್ಮಿಗಿ ಕೆಂಚನ ಗೌಡರು ತಲೆ ತಪ್ಪಿಸಿಕೊಂಡು ಓಡಿದ್ದರಂತೆ.. ಅವರ ಹೆಂಡತಿ ಮಕ್ಕಳನ್ನು ಬೆಳಗಾವಿಯಲ್ಲಿ ಸೆರೆಯಲ್ಲಿಟ್ಟಿದ್ದರಂತೆ... ಸೊರಟೂರು ದೇಸಾಯರು ಸಿಕ್ಕಿ ಬಿದ್ದಾರಂತೆ"* (ಪು.ಸಂ. ೮) ಈ ಮೇಲಿನ ಮಾತುಗಳಲ್ಲಿ ನರಗುಂದದ ದೊರೆಗಳು ಬ್ರಿಟಿಷರಿಗೆ ಎದರಿ ಬಾಳುತ್ತಿರುವ ಚಿತ್ರಣವಿದೆ. ದಿನೇ ದಿನೇ ಬ್ರಿಟಿಷರ ಆರ್ಭಟ, ದೌರ್ಜನ್ಯ, ಹಿಂಸೆ ಇವು ಹೆಚ್ಚಾಗಿ ನರಗುಂದದ

ದೊರೆಗಳು ಭಯದಿಂದ ಜೀವಿಸುತ್ತಾರೆ. ಇಲ್ಲಿ ಕಂಡು ಬರುವ ಒಂದೊಂದು ಭಯಾನಕ ಪ್ರಸಂಗಗಳು ಒಂದೊಂದು ರೀತಿಯ ಭಯ, ಆತಂಕವನ್ನು ಸೃಷ್ಟಿಸಿರುವುದನ್ನು ಕಾಣಬಹುದು.

ಹೀಗೆ ಜನ ಅನೇಕ ರೀತಿಯಲ್ಲಿ ಮಾತಾನಾಡಿಕೊಳ್ಳುತ್ತಾರೆ. ಬ್ರಿಟಿಷರು ಧಾರವಾಡದ ಸುತ್ತಲಿನ ಪ್ರದೇಶಗಳಿಗೆಲ್ಲಾ ಸೈನಿಕರನ್ನು ರಾತ್ರಿಯ ವೇಳೆ ಪಹರೆ ತಿರುಗಲು ಬಿಟ್ಟು, ಜನರ'ಲ್ಲಿ ಅತಂಕವನ್ನ ಸೃಷ್ಟಿ ಮಾಡುತ್ತಾರೆ. ಇದನ್ನೆಲ್ಲ ಕಾದಂಬರಿ ಎಳೆ ಎಳೆಯಾಗಿ ಚಿತ್ರಿಸುತ್ತದೆ. ದಿನದಿಂದ ದಿನಕ್ಕೆ ಧಾರವಾಡದ ಜನರಲ್ಲಿ ಮೈನವಿರೇಳಿಸುವಂತಹ ಘಟನಾವಳಿಗಳಳು ನಡೆಯುತ್ತವೆ. ನಾನಾಸಾಹೇಬನ ಸೈನಿಕರಾದ ಕಮಲನಾಭಪಂಥ ಮತ್ತು ಪದ್ಮನಾಭಪಂಥ ಇವರಿಬ್ಬರೂ ನರಗುಂದ ದೊರೆಯಾದ ಬಾಬಾಸಾಹೇಬ ಸೈನ್ಯ ಸಹಾಯವನ್ನ ಯಾಚಿಸಿ ನರಗುಂದಕ್ಕೆ ಬಂದು ಅಲ್ಲಿ ಸೆರೆ ಸಿಕ್ಕಿ ಕಂಗೆಡುವುದಕ್ಕಿಂತಲೂ ಸಾಮಾನ್ಯ ಜನರ ಕಂಗೆಡುವಿಕೆಯು ಹೆಚ್ಚು ತೀವ್ರವಾಗಿ ಇಲ್ಲಿ ಬಂದಿದೆ.

ಬ್ರಿಟಿಷರು ತಮ್ಮ ಆಡಳಿತವನ್ನು ಸುಸೂತ್ರವಾಗಿ ನಡೆಸುವ ದೃಷ್ಟಿಯಿಂದ ದಕ್ಷಿಣದ ಧಾರವಾಡದ ಜಿಲ್ಲೆಗೆ ಒಬ್ಬ ಕಲೆಕ್ಟರ್ ಒಜಿಲ್ವೆ ಎಂಬುವವನ್ನು ನೇಮಕ ಮಾಡುತ್ತಾರೆ. ಆತನು ಆ ಜಿಲ್ಲೆಯ ಸಮಸ್ತ ಆಡಳಿತ ಚುಕ್ಕಾಣಿ ಹಿಡಿದು ಪ್ರತಿನಿತ್ಯ ವರದಿಯನ್ನು ಕಂಪನಿ ಸರ್ಕಾರಕ್ಕೆ ಒಪ್ಪಿಸುತ್ತಿರುತ್ತಾನೆ. ಈತನು ಜಿಲ್ಲೆಯಲ್ಲಿ ಅನುಮಾನಾಸ್ಪದ ವ್ಯಕ್ತಿ ಕಂಡು ಬಂದರೆ ಅವರ'ನ್ನು ಕಂಡಲ್ಲಿ ಗುಂಡು ಹೊಡೆದು ಕೊಲೆ ಮಾಡುವುದಕ್ಕೆ ಹಿಂಜಗೆಯುತ್ತಿರಲಿಲ್ಲ. ಸಾಕಷ್ಟು ಜನ ಇವನ ಆಡಳಿತದಿಂದ ಕಂಗಾಲಾಗಿರುತ್ತಾರೆ. ಕೆಲವು ಜನರು ನರಗುಂದದ ದೊರೆಯಾದ ಬಾಬಾಸಾಹೇಬ ಬ್ರಿಟಿಷರ ಹಿಂಸೆಯನ್ನು ತಡೆಯಲಾರದೆ. ಓಡಿ ಹೋಗಿರಬಹುದೆಂದು ಗುಮಾನಿ ಪಡುತ್ತಿರುತ್ತಾರೆ. ಈ ರೀತಿಯಾಗಿ ಬ್ರಿಟಿಷರು ಭಾರತೀಯರಿಗೆ ಅನೇಕ ವಿಧದಲ್ಲಿ ಜನರನ್ನು ಕಂಗಾಲು ಮಾಡಿರುವ ಸಣ್ಣಪುಟ್ಟ ವಿವರಗಳನ್ನು ಕಾದಂಬರಿಯು ಹಿಡಿದು ಕೊಡುತ್ತದೆ. ಪದ್ಮನಾಭಪಂತನು ನಾನಾಸಾಹೇಬನ ವಿಷಯ ಮುಟ್ಟಿಸಲು ನವಲುಗುಂದದಿಂದ ತಪ್ಪಿಸಿಕೊಂಡು ಬಂದು ಬ್ರಿಟಿಷರಿಗೆ ಸೆರೆಸಿಕ್ಕಿದಾಗ ಅವರು ಅವನನ್ನು ಶಿಕ್ಷಿಸುವ ಪರಿಯು ಬಹಳ ಕ್ರೂರವಾಗಿದೆ. ಬ್ರಿಟಿಶರ ಆಳ್ವಿಕೆಯಲ್ಲಿ ಬೇಕಾದಷ್ಟು ಸುಧಾರಣೆಯ ಅಂಶಗಳಿದ್ದರೂ, ಅದರಲ್ಲಿ ಭೀತಿಹುಟ್ಟಿಸುವ ದಬ್ಬಾಳಿಕೆಯೂ ಇತ್ತು ಎಂಬುದನ್ನು ಕಾದಂಬರಿ ಕಾಣಿಸುತ್ತದೆ. ಭಾರತದಲ್ಲಿ ಬ್ರಿಟಿಷ್ ಸರ್ಕಾರದ ಆಡಳಿತಕ್ಕೆ ಹೀಗೆ ಕ್ರೌರ್ಯದ ಮುಖವೂ ಇದೆ. ಜನಪರತೆಯ ಮುಖವೂ ಇದೆ. ಕಾದಂಬರಿಯ ಮೊದಲ ಘಟ್ಟದಲ್ಲಿ ಬರುವ ೧೯ನೇ ಶತಮಾನದ ಬ್ರಿಟಿಶ್ ಆಡಳಿತ ಕುರಿತಂತೆ, ಹೆಚ್ಚು ವಿಮರ್ಶಕವಾಗಿದೆ.

ಬ್ರಿಟಿಷರ ಆಳ್ವಿಕೆಯು ಕಾದಂಬರಿಯಲ್ಲಿ ನದಿ ಮೂಲ ಎಂಬ ಅಧ್ಯಾಯದಲ್ಲಿ ಕಾಣಿಸಿಕೊಂಡಿದೆ. ಇದು ಕಾದಂಬರಿಗೆ ಭದ್ರತಳಪಾಯ ಹಾಕಿದಂತೆ ಗೋಚರಿಸುತ್ತದೆ. ಕಾದಂಬರಿಯು ಚಾರಿತ್ರಿಕ ವಸ್ತುವಿನಿಂದ ಮೊದಲುಗೊಂಡು ಸಾಮಾಜಿಕ ವಸ್ತುವಿಗೆ ತಿರುಗಿ ನಂತರ ರಾಜಕೀಯ ಸ್ವಾತಂತ್ರ ಸಂಗ್ರಾಮದಲ್ಲಿ ಕೊನೆಗೊಳ್ಳುತ್ತದೆ. ಹೀಗೆ ಅದರಲ್ಲಿ ಬರುವ ವಸಾಹತುಶಾಹಿಯ ಚಿತ್ರವು, ಚಾರಿತ್ರಕವೂ ಸಾಮಾಜಿಕವೂ ರಾಜಕೀಯವೂ ಆಗಿದೆ.

ಬಹಳ ಮಹತ್ವದ ವಿಷಯವೆಂದರೆ, ಕಾದಂಬರಿಯು, ಬ್ರಿಟಿಶರ ಆಳ್ವಿಕೆಯ ಕೇವಲ ಕೆಡುಕಿನ ಚಿತ್ರಗಳನ್ನು ನೀಡುವುದಿಲ್ಲ. ಅವರ ಆಳ್ವಿಕೆಯ ಭಾಗವಾಗಿ ಬಂದಿರುವ ಆಧುನಿಕತೆ, ವೈಚಾರಿಕತೆ ಶಿಕ್ಷಣ ಮುಂತಾದ ವಿಮೋಚನೆ ಮಾಡುವ ಅಂಶಗಳನ್ನು ಕೂಡ ಚಿತ್ರಿಸುತ್ತದೆ. ಬ್ರಿಟಿಷರು ಜನರನ್ನ ತಮ್ಮ ವಿಶ್ವಾಸಕ್ಕೆ ತೆಗೆದುಕೊಂಡು ಉತ್ತಮವಾಗಿ ಆಳ್ವಿಕೆ ನಡೆಸುತ್ತಿರುವುದನ್ನು ಕೂಡ ಚಿತ್ರಿಸುತ್ತದೆ. ವಾಸಣ್ಣನ ಮಕ್ಕಳು ಮತ್ತು ವೆಂಕಣ್ಣನ ಮಕ್ಕಳು ತಮ್ಮ ಹಿರಿಯರಿಗಿಂತ ಉತ್ತಮವಾದ ನಾಗರಿಕರಾಗಿ ಒಳ್ಳೆಯ ಜೀವನ ನಡೆಸಲು ಸಾಧ್ಯವಾಗುವುದು, ಇದೇ ಬ್ರಿಟಿಶರು ಕೊಟ್ಟ ಶಿಕ್ಷಣದಿಂದ. ಬ್ರಿಟಿಶರು ಕೊಟ್ಟ ಆಧುನಿಕ ಶಿಕ್ಷಣವು ಜನರನ್ನು ಸುಧಾರಿಸುವ ಒಳ್ಳೆಯ ಕೆಲಸವನ್ನು ಮಾಡುವುದನ್ನು ಕಾದಂಬರಿ ಕಡೆಗಣಿಸುವುದಿಲ್ಲ. ಹೀಗಾಗಿ ಬ್ರಿಟಿಶರು ಇಲ್ಲಿ ಹಗೆಗಳೂ ಆಗಿದ್ದಾರೆ. ಮಿತ್ರರೂ ಆಗಿದ್ದಾರೆ. ಈ ನಾಯಕ ಮತ್ತು ಖಳನಾಯಕ ಪಾತ್ರಗಳೆರಡೂ ಅವರಲ್ಲಿ ಮಿಶ್ರವಾಗಿ ಬರುವಂತೆ ಕಾದಂಬರಿಯು ಅವರ ಪಾತ್ರವನ್ನು ಗ್ರಹಿಸಿದೆ. ಇದು ಕಾದಂಬರಿಯ ವೈಚಾರಿಕ ಸಮತೋಲನ ಮತ್ತು ಪ್ರಬುದ್ಧತೆಯ ಸಂಗತಿಯಾಗಿದೆ. ಕಾದಂಬರಿಯ ಯಶಸ್ಸಿಗೆ ಈ ಪ್ರಬುದ್ಧತೆಯೂ ಒಂದುಕಾರಣವಾಗಿದೆ.

### ೩.೨. ಸ್ವಾತಂತ್ರ ಚಳುವಳಿಯ ಸ್ವರೂಪ

ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯು ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಿಂದ ಆರಂಭವಾಗುತ್ತದೆ. ಅದು ೧೯೪೭ರ ಕೊನೆಯ ಸ್ವಾತಂತ್ರ ಚಳುವಳಿಯ ಮೂಲಕ ಮುಕ್ತಾಯವಾಗುತ್ತದೆ. ಇದನ್ನು ನೋಡಿದರೆ ಇದೊಂದು ಸ್ವಾತಂತ್ರ್ಯ ಚಳುವಳಿಯ ಕಾದಂಬರಿ ಎನ್ನಬಹುದು. ಉತ್ತರ ಕರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ಬಗ್ಗೆ ಈ ಭಾಗದಿಂದ ಬಸವರಾಜ ಕಟ್ಟಿಮನಿಯವರ 'ಮಾಡಿ ಮಡಿದವರು' ಎಂಬ ಕಾದಂಬರಿ ಈಗಾಗಲೇ ಬಂದಿದೆ. ಅದು ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯ ಬಗ್ಗೆ ಇರುವಂತಹದು. ಆದರೆ 'ಹಳ್ಳ ಬಂತು ಹಳ್ಳ' ಕಾದಂಬರಿಯು ೧೮೫೭ರಿಂದ ೧೯೪೭ರ ವರೆಗೆ ಅಂದರೆ, ನರಗುಂದದ ದಂಗೆಯಿಂದ ಹಿಡಿದು ನವಲಗುಂದದ ಬಂಡಾಯದವರೆಗೆ, ಒಂದು ಶತಮಾನದ ಭಿತ್ತಿಯಲ್ಲಿ ಅರಳಿದ ಕಾದಂಬರಿ. ಕಾದಂಬರಿಯಲ್ಲಿ ಪ್ರಪ್ರಥಮ ಬಾರಿಗೆ

ಸ್ವಾತಂತ್ರ ಸಂಗ್ರಾಮದ ಹೊಗೆಯಾಡುವುದು ಧಾರವಾಡದಲ್ಲಿ ಅಲ್ಲಿ ಒಬ್ಬ ಕೃಷ್ಣರಾಯ ಎಂಬುವನಿಂದ. ಕೃಷ್ಣರಾಯನು ಭಾರತಾಂಬೆಯನ್ನ ಉದ್ದೇಶಿಸಿ *"ಭಾರತಾಂಬೆಯ ಸತ್ಪುತ್ರರೇ, ನಿಮಗೆ ನಿಮ್ಮ ತಾಯಿಯ ಆಕ್ರಂದನ ಕೇಳಿಸುತ್ತದೆಯೇ ಇಲ್ಲವೆ"* (ಪು.ಸಂ.೧೯೩) ಎಂದು ಹೇಳುತ್ತಾನೆ. ರಾಷ್ಟ್ರೀಯ ಚಳುವಳಿಯು ಹೇಗೆ ಒಬ್ಬ ತಾಯಿಯು ಸೆರೆಗೆ ಸಿಕ್ಕಿದ್ದಾಳೆ ಎಂಬ ಕಲ್ಪನೆಯಿಂದ ಭಾವುಕತೆಯನ್ನು ಸೃಷ್ಟಿಸಿಕೊಂಡು ರಾಜಕೀಯ ಹೋರಾಟಕ್ಕೆ ಪ್ರೇರಣೆಯನ್ನು ಪಡೆದುಕೊಂಡಿದೆ ಎಂಬುದು ಇದರಿಂದ ತಿಳಿಯುತ್ತದೆ. ಕೃಷ್ಣರಾಯನು ೧೮೫೭ರಲ್ಲಿ ನಡೆದ ಪ್ರಮುಖ ಘಟನೆಗಳನ್ನು ಆ ತುಂಬಿದ ಸಭೆಯಲ್ಲಿ ಪುನರಾವರ್ತನೆ ಮಾಡುತ್ತಾನೆ. ಮಾಡಿ ಧಾರವಾಡದ ಜನತೆಯಲ್ಲಿ ಕ್ರಾಂತಿಯ ಬೆಂಕಿಯನ್ನು ಹತ್ತಿಸುತ್ತಾನೆ. ನಮ್ಮ ದೇಹದಲ್ಲಿನ ರಕ್ತವನ್ನ ಹರಿಸಲು ನಾವು ಸಿದ್ದರಿದ್ದೇವೆ' ಎಂದು ಪ್ರೇರಿಸುತ್ತಾನೆ. ಅವನು ಹೇಳುವ ಮಾತು ನಿಜವಾಗುತ್ತದೆ. ಯಾಕೆಂದರೆ ವಾಸಣ್ಣನ ಕುಟುಂಬದ ಒಬ್ಬ ತರುಣ ಮುಂದೆ ಸ್ವಾತಂತ್ರ್ಯ ಹೋರಾಟಗಾರನಾಗಿ ರೂಪುಗೊಂಡಾಗ, ಅವನನ್ನು ಕೊಲ್ಲಲಾಗುತ್ತದೆ. ಹೀಗೆ ಕಾದಂಬರಿಯು ಪದ್ಮನಾಭಪಂತನ ರಕ್ತದ ಅರ್ಪಣೆಯಿಂದ ಆರಂಭವಾಗಿ ರಾಮುವಿನ ರಕ್ತಾರ್ಪಣೆಯ ಮೂಲಕ ಮುಗಿಯುತ್ತದೆ. ಚರಿತ್ರೆ ವರ್ತಮಾನವನ್ನು ಪೇರಿಸುತ್ತದೆ. ವರ್ತಮಾನವು ಚರಿತ್ರೆಯಿಂದ ತನಗೆ ಬೇಕಾದ ಶಕ್ತಿಯನ್ನು ಪಡೆದುಕೊಳ್ಳುತ್ತದೆ. ಇದಕ್ಕೆ ಇನ್ನೊಂದು ಸಾಕ್ಷಿ, ೧೮೫೭ಕ್ಕಿಂತಲೂ ಹಿಂದಿನದಾದ ಕಿತ್ತೂರು ಹೋರಾಟದ ಸ್ಮೃತಿಯನ್ನೂ ಕೂಡ ಕಾಂಗ್ರೆಸ್ ಚಳುವಳಿಗಾರರು ಮಾಡಿಕೊಳ್ಳುವುದು. ಸ್ವಾತಂತ್ರ್ಯ ಸಂಗ್ರಾಮಕ್ಕೆ ಜನರಿಗೆ ಕರೆಗೊಡುವ ಭಾಷಣವೊಂದರಲ್ಲಿ ಈ ನೆನಪುಗಳೂ ಬರುತ್ತವೆ. *"ಕಿತ್ತೂರಿನ ಕಲಿಗಳೇ ನರಗುಂದದ ನರಕೇಸರಿಗಳೇ ಭಾರತಾಂಬೆಯ ಆಕ್ರಂದನವನ್ನು ಕೇಳಿ ಅವಳ ಕೈ ಬೇಡಿಗಳನ್ನು ಕತ್ತರಿಸಿ ಎಸೆಯುವ ಧೀರ ಗಂಡುಗಲಿಗಳಾಗುತ್ತಿರೋ ಅಥವಾ ಬ್ರಿಟಿಷರು ಎಸೆಯುವ ತುಂಡು ರೊಟ್ಟಿಗಳಿಗಾಗಿ ಆಸೆಪಟ್ಟು ಎಂಜಲು ಸುರಿಸುವ ಷಡ ಶಿಖಂಡಿಗಳಾಗುತ್ತೀರೋ?"* (ಪು.ಸಂ.೧೯೩) ಎಂದು ಸ್ಥಳೀಯ ನಾಯಕರು ಜನರಲ್ಲಿ ಹೋರಾಟದ ಕಿಚ್ಚನ್ನ ಹತ್ತಿಸುವರು. ಜನರಲ್ಲಿ ಕ್ರಾಂತಿಯ ಕೆಚ್ಚನ್ನು ಮೂಡಿಸುವರು. ಈ ಘಟನೆಗಳನ್ನು ಕಾದಂಬರಿಯು ಬಹಳ ಶ್ರದ್ಧೆಯಿಂದ ಚಿತ್ರಿಸುತ್ತದೆ.

*"ನಿಮ್ಮ ಮಕ್ಕಳ ರಕ್ತಾಭಿಷೇಕದಿಂದ ಈ ಭೂಮಿ ಪುನೀತ ಆಗೇದ ಅಂಬೋದನ್ನ ಮರೀಬ್ಯಾಡರೀ... ಆ ರಕ್ತ ಸಿಂಚನದಿಂದ ಫಲವತ್ತಾದ ಈ ಧಾರವಾಡದ ಭೂಮಿಯೊಳಗ ಕ್ರಾಂತಿಯ ಬೀಜಗಳು ಮೊಳೆತು ಹೆಮ್ಮರಗಳಾಗಿ ಬೆಳೀತಾವ ಅಂಬೋದನ್ನ ಮರೀಬ್ಯಾಡರೀ... ನೆನಪಿರಲಿ"*

( ಪು.ಸಂ. ೧೯೩) ಈ ಮೇಲಿನ ಮಾತುಗಳಿಂದ ಧಾರವಾಡದ ಜನತೆಯಲ್ಲಿ ಕ್ರಾಂತಿಯ ಕಿಚ್ಚನ್ನು ಹಬ್ಬಿಸಿ ಅವರನ್ನು ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕುವಂತೆ ಪ್ರೇರೇಪಿಸುವ ಚಿತ್ರಣವಿದೆ.

ಸ್ವಾತಂತ್ರ್ಯ ಚಳುವಳಿಯ ಕೆಲವು ಪ್ರಸಂಗಗಳು ಗಂಭೀರವಾಗಿದ್ದರೂ, ಅವನ್ನು ಕಾದಂಬರಿಯು ವಿನೋದದಲ್ಲಿ ಚಿತ್ರಿಸುತ್ತದೆ. ಇದಕ್ಕೆ ಗಾಂಧಿ ಟೋಪಿ ಪ್ರಕರಣವು ಒಂದು ಸಾಕ್ಷಿ. ಧಾರವಾಡದ ಶಾನವಾಡ ಮತ್ತು ಕಾಲವಾಡ ಎಂಬ ಎರಡು ಪ್ರದೇಶಗಳಲ್ಲಿ ಗಾಂಧಿಟೋಪಿಗಳನ್ನು ಧರಿಸುತ್ತಿರುವವರ ಸಂಖ್ಯೆ ಇದ್ದಕ್ಕಿದ್ದಂತೆ ಹೆಚ್ಚಾಗುತ್ತದೆ. ಇದನ್ನು ಕಂಡು ಬ್ರಿಟೀಶ್ ಅಧಿಕಾರಿಯಾದ ಇಸ್ಮಾಯಿಲ್‌ಖಾನ್ ಎಂಬುವನು ಬ್ರಿಟಿಶ್ ಸರ್ಕಾರಕ್ಕೆ ದೂರು ನೀಡುತ್ತಾನೆ. ಇದರಿಂದ ಸರ್ಕಾರ ಪೊಲೀಸರನ್ನು ಹೆಚ್ಚು ನೇಮಿಸುತ್ತದೆ. ಆದರೆ ಈ ಪೋಲಿಸರು ಮಾಡುವ ದಬ್ಬಾಳಿಕೆ, ಅವರು ಪಡುವ ಕಷ್ಟ, ಅವರಿಗಾಗುವ ಅಪಮಾನ ಎಲ್ಲವನ್ನೂ ಕಾದಂಬರಿ ವಿವರವಿವರವಾಗಿ ತರುತ್ತದೆ.

ಬ್ರಿಟಿಶ್ ಅಧಿಕಾರಿಯಾದ ಇಸ್ಮಾಯಿಲ್ ಖಾನ್ ದರ್ಪದಿಂದ 'ರಾಮೂ ಎಲ್ಲಿ ಅದಾನ' ಎಂದು ಘರ್ಜಿಸಿದಾಗ, ವಾಸುದೇವಾಚಾರ್ ಅವರ ಪ್ರತಿಕ್ರಿಯೆಯು ಹೀಗಿದೆ: ***"ವಾಸುದೇವಾಚಾರ್ಯರು ಮತ್ತೊಷ್ಟು ಕಂಗೆಟ್ಟವರಾಗಿ ಮುಖ ಕೆಳಗೆ ಹಾಕಿ ಉಕ್ಕಿ ಬಂದ ಕಣ್ಣೀರನ್ನು ತಡೆಯುತ್ತಾ ಸಾಹೇಬರ ಎಂದು ಏನೋನೋ ತೊದಲು ಮಾತನಾಡ ತೊಡಗಿದರು"***. (ಪು.ಸಂ.೨೦೭) ಇಲ್ಲಿ ತಂದೆಯ ಅಸಹಾಯಕತೆಯನ್ನು ತಿಳಿಯಬಹುದು. ತಂದೆಯಾದವರು ತನ್ನ ಮಗನ್ನು ಹೇಗಾದರೂ ಮಾಡಿ ಕಾಪಾಡಬೇಕೆಂದು ಕೊನೆಗೆ ಕಾಲನ್ನು ಓಡಿಯುವುದು, ಕಣ್ಣೀರನ್ನು ಸುರಿಸುವುದನ್ನು ಕಾಣಬಹುದು. ಆದರೆ ಈ ಬಗೆಯ ಅಸಹಾಯಕತೆಯನ್ನು ಇಲ್ಲಿನ ಪಾತ್ರಗಳು ತಮ್ಮ ನೈತಿಕ ಧೈರ್ಯದಿಂದ ಗೆಲ್ಲುತ್ತ ಹೋಗುತ್ತಾರೆ.

ವಿಶೇಷವೆಂದರೆ, ಸ್ವಾತಂತ್ರ ಚಳುವಳಿಯನ್ನು ಹಬ್ಬಿಸಲು ಇಲ್ಲಿ ಜನಪದ ಕಲೆಗಳನ್ನು ಬಳಸಿಕೊಳ್ಳುವುದು ಕಾಣಬಹುದು. ನವಲಗುಂದದ ಪಕ್ಕದ ಹಳ್ಳಿಯಲ್ಲಿ ಶ್ರೀಕೃಷ್ಣ ಪಾರಿಜಾತ ಎಂಬ ನಾಟಕವನ್ನಾ ಏರ್ಪಡಿಸಿ ಅಲ್ಲಿಗೆ ಧಾವಿಸಿ ಬಂದ ಜನರಿಗೆ ಸ್ವಾತಂತ್ರ ಚಳುವಳಿಯ ಸಂದೇಶವನ್ನು ಕೊಡುವ ಪ್ರಸಂಗವು ಇಲ್ಲಿ ಬರುತ್ತದೆ. ನಾಟಕಕ್ಕೆ ಸೇರಿದ್ದ ನೂರಾರು ಪ್ರೇಕ್ಷಕರ ಮೂಲಕ ***'ಬೋಲೋ ಭಾರತ ಮಾತಾಕಿ ಜೈ, ಮಹಾತ್ಮ ಗಾಂಧೀಜಿ ಕಿ ಜೈ, ಬ್ರಿಟಿಷ್ ಸರ್ಕಾರಕ್ಕೆ..... ಧಿಕ್ಕಾರ"*** ಎಂಬ ರಣಘೋಷಣೆಗಳನ್ನ ಕೂಗಿಸಲಾಗುತ್ತದೆ.

ನವಲಗುಂದದಂತಹ ಪುಟ್ಟ ಊರಿನ ಮೂಲಕ ಭಾರತದ ವಿಶಾಲ ಸ್ವಾತಂತ್ರ್ಯದ ಹೋರಾಟದ ಕಥೆಯನ್ನು ನೋಡುವ ಕಾದಂಬರಿ ದೃಷ್ಟಿಕೋನವು ಚೆನ್ನಾಗಿ ಬಂದಿದೆ. ಧಾರವಾಡದ ಪೋಲಿಸರು ಸ್ಥಳೀಯ ಜನರನ್ನ ಹಿಂಸಿಸುವುದು, ಅವಾಚ್ಯ ಶಬ್ದಗಳಿಂದ ಬೈಯುವುದು ಇತ್ಯಾದಿಗಳೆಲ್ಲ ಇವೆ. ಆದರೆ ಅದಕ್ಕೆ ಪ್ರತಿಕ್ರಿಯೆಯಾಗಿ ಜನರು ಸರ್ಕಾರಕ್ಕೆ

ಕೊಡುವ ಏಟುಗಳನ್ನು ಕೂಡ ಕಾದಂಬರಿ ಅತ್ಯಂತ ಪ್ರೀತಿಯಿಂದ ಚಿತ್ರಿಸುತ್ತದೆ. ನೆರೆದಿದ್ದ ಕೆಲವರನ್ನ ಸೆರೆಮನೆಗೆ ಹಾಕಿದಾಗ ಜನರು ಒಂದಾಗಿ ಸೆರೆಮನೆಯ ಎದುರಿಗೆ ಪ್ರತಿಭಟನೆ ಮಾಡುವುದನ್ನು ಕಾದಂಬರಿ ಬಹಳ ಶ್ರದ್ಧೆಯಿಂದ ತರುತ್ತದೆ.

ಕಾದಂಬರಿಯ ಕೊನೆಯ ಭಾಗವು ಬಹಳ ವೇಗವಾಗಿ ನಡೆಯುತ್ತದೆ. ಘಟನೆಗಳು ನವಲಗುಂದ, ಧಾರವಾಡ ಮುಂಬೈ ಹೀಗೆ ಮೂರು ಜಾಗಗಳಲ್ಲಿ ನಡೆಯುತ್ತವೆ. ಕಾದಂಬರಿಯ ನಾಯಕನಂತೆ ತೋರುವ ವಾಸಣ್ಣನು ಹಿಂದೆ ಸರಿಸುವಂತೆ ನವಲಗುಂದ ಹೋರಾಟದ ನಾಯಕನಾದ ರಾಮು ಕಾದಂಬರಿಯಲ್ಲಿ ಬೆಳೆಯುತ್ತಾನೆ. ಇಲ್ಲಿ ಮಹತ್ವದ ವಿಷಯವೆಂದರೆ, ಮೊದಮೊದಲು ಮೊಮ್ಮಗನು ಹೋರಾಟಗಾರನಾಗುವುದನ್ನು ವಿರೋಧಿಸುವ ವಾಸುದೇವಾಚಾರ್, ಮೊಮ್ಮಗನನ್ನು ಉಪ್ಪು ಮಾರುವ ವಿಷಯಕ್ಕೆ ಸಂಬಂಧಿಸಿದಂತೆ ಬಂಧಿಸಿದಾಗ, ತಾವೂ ಹೋರಾಟಗಾರರಾಗಿ ರೂಪುಗೊಳ್ಳುವುದು. ಬ್ರಿಟಿಷ್ ಅಧಿಕಾರಿಗಳನ್ನು ಬೆದರಿಸುವಂತೆ ಗರ್ಜಿಸುವುದು. ಕಿರಿಯ ತಲೆಮಾರಿನಿಂದ ಹಿರಿಯ ತಲೆಮಾರಿನವರು ಅನೇಕ ಬಗೆಯ ಪಾಠಗಳನ್ನು ಕಲಿಯುವುದನ್ನು ಇಲ್ಲಿ ಗಮನಿಸಬಹುದು.

ಈ ಕಾದಂಬರಿಯ ವಿಶೇಷತೆಯೆಂದರೆ, ಕಾನ್ಪುರ ಮತ್ತು ನರಗುಂದ, ನವಲಗುಂದ ಎಂಬ ದೂರದ ಎರಡು ಊರುಗಳ ನಡುವಣ ಸ್ವಾತಂತ್ರ ಸಂಗ್ರಾಮದ ಮೂಲಕ ಆರಂಭವಾಗುವುದು. ನವಲುಗುಂದ, ಧಾರವಾಡ ಹಾಗೂ ಮುಂಬೈ ನಡುವಣ ಹೋರಾಟದ ಸಂಬಂಧಗಳ ಮೂಲಕ ಮುಗಿಯುವುದು. ಕೆಲವು ರಾಜ್ಯಗಳ ಸ್ವಹಿತಾಸಕ್ತಿಯ ಕಾರಣದಿಂದ ಆರಂಭವಾದ ಬ್ರಿಟಿಶರ ವಿರುದ್ಧದ ಹೋರಾಟವು ಮುಂದೆ ಇಡೀ ಜನಸಮುದಾಯದ ಸಾಮೂಹಿಕ ಸಂಗ್ರಾಮವಾಗಿ ಮಾರ್ಪಡುವುದನ್ನು ಕಾದಂಬರಿ ಹಿಡಿದಿಟ್ಟಿದೆ. ಕಾದಂಬರಿಯು ನವಲಗುಂದದ ಸಾಮಾನ್ಯ ಮನುಷ್ಯರನ್ನು ಮಾತ್ರವಲ್ಲದೆ, ***ಗಾಂಧಿ, ನೆಹರು, ಅಜಾದ್, ಪಟೇಲ್*** ಇನ್ನು ಮುಂತಾದವರನ್ನು ಒಳಗೊಳ್ಳುವ ವಿಶಾಲ ಹೋರಾಟದ ಚಿತ್ರವನ್ನು ಅದು ಕಟ್ಟಿಕೊಡುತ್ತದೆ. ಇದರ ಮೂಲಕ ದೇಶಕ್ಕೆ ಬಿಡುಗಡೆ ತಂದುಕೊಟ್ಟವರು ಕೇವಲ ದೊಡ್ಡ ನಾಯಕರಲ್ಲ, ರಾಮುವಿನಂತಹ ಚರಿತ್ರೆಯ ಪುಟಗಳಲ್ಲಿ ಹೆಸರಿಲ್ಲದ ಸಣ್ಣ ಊರಿನ ತರುಣನಂತಹ ಲಕ್ಷಾಂತರ ಕಾರ್ಯಕರ್ತರು ಕೂಡ ಎಂಬ ಚರಿತ್ರೆಯನ್ನು ಕಾದಂಬರಿಯು ಬರೆಯಲು ಯತ್ನಿಸುತ್ತದೆ.

ಮುಂಬೈನಲ್ಲಿ ನಡೆಯುವ ಸ್ವಾತಂತ್ರ್ಯ ಹೋರಾಟದ ಚಿತ್ರಗಳು ಬಹಳ ವಿಶಿಷ್ಟವಾಗಿವೆ. ಭಾರತ ಬಿಟ್ಟು ತೊಲಗಿ ಚಳುವಳಿಯ ಭಾಗವಾಗಿ, ಮುಂಬೈಗೆ ಭಾರತದ ನಾನಾ ಮೂಲೆಗಳಿಂದ ಜನ ಉತ್ಸುಕರಾಗಿ ಈ ಕಾಂಗ್ರೆಸ್ ಸಭೆಗೆ ಆಗಮಿಸುತ್ತಾರೆ. ಆಗ ಮುಂಬೈಯ ಹೋಟೆಲ್ ಒಂದರಲ್ಲಿ ಕಾಂಗ್ರೆಸ್‌ನವರು ಸೇರಿ ಬ್ರಿಟಿಷರನ್ನು ಭಾರತದಿಂದ ಓಡಿಸಲು

ಮಹತ್ವದ ನಿರ್ಣಯ ಕೈಗೊಳ್ಳುತ್ತಿದ್ದರು. ರಾಷ್ಟ್ರೀಯ ನಾಯಕರಾದ ***ಗಾಂಧಿ, ಜವಹರಲಾಲ್ ನೆಹರು, ಅಬ್ದುಲ್ ಕಲಾಂ ಅಜಾದ್, ಸರ್ದಾರ್ ವಲ್ಲಭಬಾಯಿ ಪಟೇಲ್*** ಅವರು ಸೇರಿ ***"ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" "ಕ್ವಿಟ್ ಇಂಡಿಯಾ"*** ಎಂಬ ಸಮರ ಘೋಷಣೆಯ ನಿರ್ಣಯ ಹೊರಬೀಳುವ ಹೊತ್ತದು. ಆಗ ಜನ ***'ಭಾರತ ಮಾತಾ ಕಿ ಜೈ, ಮಹಾತ್ಮ ಗಾಂಧೀಜಿ ಕೀ ಜೈ'*** ಎಂಬ ಘೋಷಣೆಗಳನ್ನು ಕೂಗುತ್ತಾರೆ. ಜನ ನಂತರ ತಮ್ಮತಮ್ಮಲ್ಲಿಯೇ ತಮ್ಮ ಕಡೆಯ ಸ್ವಾತಂತ್ರ ಸಂಗ್ರಾಮದ ಅನುಭವವನ್ನು ಹಂಚಿಕೊಳ್ಳುತ್ತಾರೆ. ಹೋರಾಟವು ಜನರಲ್ಲಿ ವಿಚಿತ್ರವಾದ ಏಕತೆಯನ್ನು ಉಂಟುಮಾಡಿರುತ್ತದೆ. ಕಾದಂಬರಿಯು ಒಂದು ಹೋರಾಟವು ಜನರ ಪ್ರಾದೇಶಿಕ ಮತ್ತು ಜಾತಿಯ ಕಟ್ಟುಪಾಡನ್ನು ಹೇಗೆ ಮುರಿದು ಜನರನ್ನು ಏಕೀಭವಿಸುತ್ತದೆ ಎಂದು ಸೂಚಿಸುತ್ತದೆ. ಹೋರಾಟಗಾರರು ಕ್ರಾಂತಿಕಾರರು ಇಂತಹ ಮಹತ್ವದ ಘೋಷಣೆಗಳನ್ನ ಕೂಗುವುದಕ್ಕೆ ಮುಂದಾದರೂ ಇದರಿಂದ ಬ್ರಿಟಿಷರಲ್ಲಿ ಅತಂಕ ಮೂಡಿಸುವುದನ್ನ ಕಾದಂಬರಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ.

# ಅಧ್ಯಾಯ–೪. ಸಾಹಿತ್ಯಿಕ ವಿಶ್ಲೇಷಣೆ

೪.೧– ವಸ್ತು

೪.೨– ಭಾಷೆ

೪.೩– ಶೈಲಿ (ಕಥನಕ್ರಮ)

೪.೪ – ಪಾತ್ರ ಚಿತ್ರಣ

## ಅಧ್ಯಾಯ. ೪

## 'ಹಳ್ಳಬಂತು ಹಳ್ಳ'ದ ಸಾಹಿತ್ಯಿಕ ವಿಶ್ಲೇಷಣೆ

ಸಾಹಿತ್ಯ ಕೃತಿಯೊಂದು ಎಷ್ಟೇ ಸಾಮಾಜಿಕ ವಿಶ್ಲೇಷಣೆಗೆ ಒಳಗಾದರೂ, ಅಂತಿಮವಾಗಿ ಅದು ಕಲೆಯಾಗಿರುವ ಕಾರಣ, ಕಲೆಯ ನೆಲೆಯಿಂದ ಪರಿಶೀಲನೆಗೆ ಒಳಗಾಗಲೇಬೇಕು. ಈ ಹಿನ್ನೆಲೆಯಿಂದ, 'ಹಳ್ಳಬಂತು ಹಳ್ಳ' ಕಾದಂಬರಿಯ ವಸ್ತು, ರೂಪ, ಧೋರಣೆ ಮತ್ತು ಭಾಷೆಯ ಬಳಕೆ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

### ೪.೧. ವಸ್ತು

ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯು ವಸ್ತು ನವಲುಗುಂದದ ಒಂದು ಕುಟುಂಬದ ಮೂರುತಲೆಮಾರಿನ  ಏಳುಬೀಳಿನ ಕಥೆಯಾಗಿದೆ. ಹಾಗೆ ಕಂಡರೆ ಈ ಕಾದಂಬರಿ ವಸ್ತು ಕನ್ನಡಕ್ಕೆ ಹೊಸತಲ್ಲ. ಕಾರಂತರ 'ಮರಳಿ ಮಣ್ಣಿಗೆ'ಯ ವಸ್ತುವನ್ನು ಇದು ಹೋಲುತ್ತದೆ. ಅಲ್ಲಿಯೂ ಮೂರು ತಲೆಮಾರಿನ ಕಥೆಯಿದೆ. ಆದರೆ ಒಂದು ಕುಟುಂಬದ ಕಥನದ ಮೂಲಕ ಒಂದು ಹಳ್ಳಿಯ ಕಥನವಾಗಿಯೂ ಆ ಹಳ್ಳಿಯ ಕಥನದ ಮೂಲಕ ಒಂದು ದೇಶದ ಕಥನವಾಗಿಯೂ ಅದು ಬೆಳೆಯುವುದು ಇಲ್ಲಿನ ವಿಶಿಷ್ಟತೆ. 'ಹಳ್ಳ ಬಂತು ಹಳ್ಳ' ಒಂದು ಬೃಹತ್ ಕಾದಂಬರಿ ಆಗಿರುವುದರಿಂದ, ಅದರಲ್ಲಿ ಒಂದು ವಸ್ತುವಿಲ್ಲ. ಹಲವು ವಸ್ತುಗಳಿವೆ. ಬ್ರಾಹ್ಮಣರ ಸಂಪ್ರದಾಯಗಳು ಅವರ ಆಚರಣೆಗಳು ಅಂತಹ ಸಂಪ್ರದಾಯಗಳ ವಿರುದ್ಧ ನಿಂತ ನಾರಾಯಣ ಮತ್ತು ಅವರ ಬದುಕು, ಬೋಧನ ಪ್ರಣಯ ಪ್ರಸಂಗಗಳು, ತುಳಸಕ್ಕನ ಆದರ್ಶತೆ, ವಾಸುದೇವಾಚಾರ್ ಅವರ ಶೋಚನೀಯ ಪರಿಸ್ಥಿತಿ, ತಿಪ್ಪಕ್ಕನ ಕುತಂತ್ರ, ಅಂಬಕ್ಕನ ಮಡಿ ಇವೆ ಮುಂತಾದ ಸನ್ನಿವೇಶಗಳನ್ನ ಕಣ್ಣಿಗೆ ಕಟ್ಟುವಂತೆ ಕಾದಂಬರಿ ಚಿತ್ರಿಸುತ್ತದೆ.

ಕಾದಂಬರಿಯು ಬ್ರಾಹ್ಮಣರ ಜೀವನ ಪದ್ಧತಿಯ ತಲ್ಲಣಗಳನ್ನು ತಿಳಿಸುವುದರ ಜೊತೆಜೊತೆಗೆ ದೇಶಕ್ಕಾಗಿ ಹೋರಾಡಿದ ಮಹನೀಯರ ಮಹತ್ವದ ಅಂಶಗಳನ್ನು ಸಹ ಕಟ್ಟಿಕೊಡುತ್ತದೆ. ಈ ಕಾದಂಬರಿಯ ವಸ್ತುವು ಹಲವು ಆಯಾಮಗಳನ್ನು ಒಳಗೊಂಡಿರುವಂತೆ ಸಂಕೀರ್ಣವಾಗಿದೆ. ಇಲ್ಲಿ ದೇಶದ ಬಿಡುಗಡೆ ಹೋರಾಡುವ ಕಥೆಯೂ ಇದೆ. ತಮ್ಮ ಬಿಡುಗಡೆಗೆ ಹೋರಾಡುವ ವ್ಯಕ್ತಿಗಳ ಕಥೆಯೂ ಇದೆ. ನಾರಾಯಣ, ರುಕುಮಾ ಇವರು ಸಂಪ್ರದಾಯದ ಕುಟುಂಬದ ಒಳಗೆ ಉಸಿರುಕಟ್ಟುವಂತೆ ಬದುಕುವವರು. ಅವರು ಕೂಡ ತಮ್ಮ ಬಿಡುಗಡೆಗಾಗಿ ಹೋರಾಟ ಮಾಡುತ್ತಾರೆ. ಅವರ ಹೋರಾಟವು ಆ ಸಂಪ್ರದಾಯದ

ಕುಟುಂಬವನ್ನು ಬಿಟ್ಟು ಹೊರಗೆ ಹೋಗುವುದರ ಮೂಲಕ ಮುಗಿಯುತ್ತದೆ. ಅವರ ಹೋರಾಟವು ದೇಶದ ರಾಜಕೀಯ ಸ್ವಾತಂತ್ರ್ಯ ಹೋರಾಟದ ಕಥೆಗಿಂತ ಭಿನ್ನವಾದುದಲ್ಲ. ಬ್ರಿಟಿಷರ ಜತೆಯಲ್ಲಿ ಭಾರತಕ್ಕೆ ಬಂದ, ವಸಾಹತುಶಾಹಿ ಆಧುನಿಕತೆಯು ಸಾಂಪ್ರದಾಯಕ ಸಮಾಜದಲ್ಲಿ ಪ್ರವೇಶ ಪಡೆಯುವುದನ್ನು ಮತ್ತು ಹಾಗೆ ಪ್ರವೇಶ ಪಡೆದು ಮಾಡುವ ಬದಲಾವಣೆಗಳನ್ನು ಅತ್ಯಂತ ವಾಸ್ತವವಾದಿಯಾಗಿ ಚಿತ್ರಿಸುತ್ತದೆ.

ಕಾದಂಬರಿಯು ಮೊದಮೊದಲು ಸಾಂಪ್ರದಾಯಿಕ ಜೀವನಕ್ರಮವನ್ನು ಹೆಚು ವಿಮರ್ಶೆಯಿಲ್ಲದೆ ಮಂಡಿಸುವಂತೆ ಆರಂಭವಾಗುತ್ತದೆ. ಆದರೆ ಕೊನೆಗೆ ವೆಂಕಣ್ಣ ಮತ್ತು ವಾಸಣ್ಣನವರ ತಲೆಮಾರಿಗೆ ಸಾಧ್ಯವಾಗದ ಬದಲಾವಣೆ ಅವರ ಮಕ್ಕಳ ಕಾಲಕ್ಕೆ ಆಗುತ್ತದೆ. ರಾಮು, ಶಾಮೂ ಮತ್ತು ಕೇಶವ ಇವರುಗಳು ವಿದ್ಯಾಭ್ಯಾಸಕ್ಕಾಗಿ ಹೊರ ರಾಜ್ಯಗಳಿಗೆ ಹೋಗಿ ಆಧುನಿಕತೆಯ ಸಮಾಜದ ಸಂಸ್ಕೃತಿಗೆ ಪರಿವರ್ತನೆಯಾಗಿ ಹೊಸ ಹೊಸ ಉದ್ಯೋಗಗಳಲ್ಲಿ ತೊಡಗುತ್ತಾರೆ. ಆಗ ಬೇರೆಯ ಜೀವನ ಪದ್ಧತಿಯ ವಿವರಗಳು ಕಾದಂಬರಿಯ ಒಡಲೊಳಗೆ ಪ್ರವೇಶ ಪಡೆಯುತ್ತವೆ.

ಶ್ರೀನಿವಾಸ ವೈದ್ಯರ ಕಥೆ ಕಾದಂಬರಿಗಳನ್ನ ಗಮನಿಸಿದರೆ ಸಾಮಾನ್ಯ ಜನರ ನೋವು-ನಲಿವು, ಸುಖ-ದುಃಖಗಳು, ಅವರ ಸಾಹಿತ್ಯದ ವಸ್ತುಗಳಾಗುತ್ತ ಬಂದಿರುವುದು ತಿಳಿಯುತ್ತದೆ. ಹಾಗೆ ಅವರ ಸಾಹಿತ್ಯದ ವಸ್ತುವು ಬಹಳ ಮೇಲುನೋಟಕ್ಕೆ ಸಾಮಾನ್ಯ ಅನಿಸುತ್ತದೆ. ಆದರೆ ಅವರು ಬದುಕಿನ ಸಣ್ಣಪುಟ್ಟ ವಿವರಗಳ ಸಮೇತ ಅವನ್ನು ಮಂಡಿಸುವ ಕಾರಣದಿಂದ ಅದೊಂದು ಜೀವನದ ಶೋಧವಾಗಿ ಬದಲಾಗುತ್ತದೆ. ಉದಾಹರಣೆಗೆ ವಾಸುದೇವಾಚಾರ್ಯರ ಮನೆಗೆ ರೈತರು ದವಸ ತಂದು ಒಪ್ಪಿಸುವ ಪ್ರಸಂಗವನ್ನೇ ಗಮನಿಸಬಹುದು. ಅಲ್ಲಿ ದವಸವನ್ನು ಮನೆಗೆ ತಂದು ಸುರಿದುಹೋದರು ಎಂದು ಒಂದು ಸಾಲಿನಲ್ಲಿ ಹೇಳಬಹುದಾದ ಘಟನೆಯನ್ನು ಕಾದಂಬರಿಯು ಅದರೆಲ್ಲ ವಿವರಗಳಲ್ಲಿ ತರುತ್ತದೆ. ದವಸ ಬಂದಾಗ ಮನೆಯಲ್ಲಿ ನಡೆಯುವ ಬೇರೆಬೇರೆ ಚಟುವಟಿಕೆಗಳು, ಬಂದ ರೈತರ ಪ್ರತಿಕ್ರಿಯೆ, ಇವೆಲ್ಲವನ್ನು ದಾಖಲಿಸುತ್ತದೆ. ಒಂದು ಪ್ರದೇಶದ ಜನರ ಜೀವನ ಪದ್ಧತಿಯನ್ನು ಕಣ್ಣಿಗೆ ನಾಟುವಂತೆ ಕಟ್ಟಿಕೊಡುತ್ತದೆ. ಇದು ಒಂದು ಜೀವನಕ್ರಮವನ್ನೇ ಕಾದಂಬರಿಯು ಶೋಧಿಸುವುದನ್ನು ತೋರಿಸುತ್ತದೆ. ಇದಕ್ಕೆ ಈ ಕೆಳಗಿನ ಭಾಗವನ್ನು ನೋಡಬಹುದು: ದವಸ ತಂದು ಒಪ್ಪಿಸಲಿಕ್ಕೆ ಬಂದ ಮಹಾದೇವಪ್ಪ *"ಲಾವಣಿ ರುಡ್ಡು ಕೊಡಲಿಕ್ಕೆ ಬಹಾಳೇ ತ್ರಾಸ ಕೊಟ್ಟ. ಬರುವಾಗ ಅವನ ಜತೆ ಇನ್ನಿಬ್ಬರು ಧಾಂಡಿಗರಾದ ರೈತರು ಬಂದಿದ್ದರು. ಯಲ್ಲರೂ ಕೂಡಿ ಒಂದೇ ರಾಗದಲ್ಲಿ. "ಬೆಳೇನ ಇಲ್ಲದ ಬರೇ ಲಾವಣಿ ಕೊಡಂದ್ರ ಎಲ್ಲಿಂದ ಬರತ್ತೈತ್ರಿ?... ಖರ್ಚೆನು ಕಡಿಮಿ ಆಯಿತೇನ್ರೀ... ಗೊಬ್ಬರ... ಕೂಲೀ... ಕಳೇ ಕೀಳೋದು.. ಬೀಜ.. ಹಪ್ತೇ ಒಂದ ಎರಡ...* ನಿಮಗೇನು

*ತಿಳಿತೈತರಿ ನಮ್ಮ ತ್ರಾಸು.. ಒಮ್ಮಿಂದೊಮ್ಮಿಗಿಲೇ ಅಷ್ಟು ದುಡ್ಡು ಮುಟ್ಟಸ ಅಂದ್ರ ಹ್ಯಾಂಗರೀ...? ಇತ್ಯಾದಿ ಇತ್ಯಾದಿ ನಾನಾ ವರಸೆಗಳನ್ನು ತೆಗೆದರು".* (ಪು.ಸಂ.೧೨೬)

ಕಾದಂಬರಿಯು ೧೮೫೭ ರಿಂದ ೧೯೪೭ರ ವರೆಗಿನ ಸ್ವಾತಂತ್ರ ಸಂಗ್ರಾಮದ ವಸ್ತುವನ್ನು ಒಳಗೊಂಡಿದೆ. ಇಂತಹ ಬಹುದೀರ್ಘಕಾಲದ ಚಾರಿತ್ರಿಕ ವಸ್ತುವನ್ನು ಸಾಹಿತ್ಯಕ್ಕೆ ತಂದಿರುವ ಕೀರ್ತಿ ವೈದ್ಯರಿಗೆ ಸಲ್ಲುತ್ತದೆ. ಇವರು ೧೮೫೭ರ ದಂಗೆಯ ಸಾವು-ನೋವುಗಳನ್ನು ಬ್ರಿಟಿಷರ ದಬ್ಬಾಳಿಕೆಯನ್ನು, ಭಾರತೀಯರು ಇದರಿಂದ ಪಡುವ ಕಷ್ಟವನ್ನು ಕಾದಂಬರಿ ವಿವರವಾಗಿ ಕಟ್ಟಿಕೊಡುತ್ತದೆ. ಹಿಂದೂ, ಮುಸ್ಲಿಂ, ಧರ್ಮದವರು ಒಂದಾಗಿ ಸ್ವಾತಂತ್ರ ಚಳುವಳಿಯಲ್ಲಿ ಭಾಗವಹಿಸಿ ಭಾರತಕ್ಕೆ ಸ್ವಾತಂತ್ರ ದೊರಕಿಸಿಕೊಡುವುದನ್ನು ಕಾದಂಬರಿ ಚಿತ್ರಿಸುತ್ತದೆ. ಈ ಕಾದಂಬರಿಯು ಆರಂಭವನ್ನು ನೋಡುವಾಗ, ಇದೊಂದು ಇತಿಹಾಸ'ದ' ವಸ್ತುವನ್ನು ಎತ್ತಿಕೊಂಡಂತೆ ಭಾಸವಾಗುತ್ತದೆ. ಆದರೆ ಬರುಬರುತ್ತ ಕಾದಂಬರಿ ಸಾಮಾಜಿಕ ಜೀವನದ ಕಡೆಗೆ ತಿರುಗುವುದನ್ನು ಕಾಣಬಹುದು. ಚರಿತ್ರೆಯ ವಸ್ತುವು ಸಾಮಾಜಿಕವಾಗಿ ಬದಲಾಗುವುದನ್ನು ಇಲ್ಲಿ ನೋಡಬಹುದು. ಕಾದಂಬರಿಯ ಕೊನೆಗೆ ವಸ್ತು ಮತ್ತೆ ಚಾರಿತ್ರಿಕವಾಗುತ್ತದೆ. ಕೊನೆಯಲ್ಲಿ ಚರಿತ್ರೆ ಮತ್ತು ಸಾಮಾಜಿಕ ಎಂಬ ಭೇದವಿಲ್ಲದೆ ಕಾದಂಬರಿಯ ವಸ್ತುವು ಕೂಡಿಕೊಂಡುಬಿಡುತ್ತದೆ. ನದಿಯು ಬೇರೆಬೇರೆ ಧಾರೆಗಳನ್ನು ಕೂಡಿಸಿಕೊಂಡು ಹರಿಯುವಂತೆ ಕಾದಂಬರಿಯ ಕಥೆಯು ಹರಿಯುತ್ತದೆ. ನದಿ ಮೂಲ ಎಂಬ ಶೀರ್ಷಿಕೆಯಲ್ಲಿ ಕಥೆ ಹುಟ್ಟಿಕೊಂಡು ಗುಪ್ತಗಾಮಿನಿ ಎಂಬ ಅಧ್ಯಾಯದಲ್ಲಿ ಕಥೆ ಗುಪ್ತವಾಗಿ ಹರಿಯುವುದನ್ನು ಗುರುತಿಸಬಹುದು.

ಊರಿಗೆ ಪ್ಲೇಗ್ ರೋಗ ಹರಡಿದಾಗ ಅಲ್ಲಿನ ಜನರು ಪರಿತಪಿಸುವ ಬಗೆಯ ಪ್ರಸಂಗವನ್ನು ಗಮನಿಸಬಹುದು. ಕೆಲವು ಜನರು ತಮಗೆ ಔಷಧಿಕೊಡುವಂತೆ ಬೇಡುವಾಗ, ಅವರಿಗೆ ವಿಚಿತ್ರವಾದ ಅಸಹಾಯಕತೆ ಬರುತ್ತದೆ. ಅವರು ***"ಒಂದು ತೊಟ್ಟು ವಿಷ ಕೊಡಿ"*** ಎಂದು ವಾಸುದೇವಾಚಾರ್‌ರವರನ್ನು ಕೇಳುತ್ತಾರೆ. ಆಗ ವಾಸುದೇವಾಚಾರ್ಯರು ವ್ಯಂಗ್ಯದಿಂದಲೂ ಆರೆ ಗಾಂಭೀರ್ಯದಿಂದಲೂ 'ವಿಷ ಇದ್ದರ ನಿನಗ್ಯಾಕ ಕೊಡುತ್ತಿದ್ದೆ? ನಾನೇ ತೊಗೊತ್ತಿದ್ದೆ' ಎಂದು ಗದರುತ್ತಾರೆ. ಸಾವು ತಡೀಲಿಕ್ಕೆ ಆಗಿದಿದ್ದರು ಸಹ ನೋವು ಕಡಿಮೆ ಮಾಡೋ ಕೆಲಸ ಕೊಟ್ಟಾನಂತ ದೇವರು ಎಂದು ಸಮಾಧಾನದ ಮಾತುಗಳು ಆಗ ಕೇಳಿ ಬರುತ್ತವೆ. ಪ್ಲೇಗಿನಿಂದ ನರಳುತ್ತಿರುವ ಜನರ ದಾರುಣ ವಸ್ತು ಸ್ಥಿತಿಯನ್ನು ಅತ್ಯಂತ ಸಮರ್ಥವಾಗಿ ಕಾದಂಬರಿ ಚಿತ್ರಿಸುತ್ತದೆ. ಹೀಗೆ ಕಾದಂಬರಿಯು ಒಂದು ವಸ್ತುವಿನದಲ್ಲ. ಬದಲಿಗೆ ಹಲವಾರು ವಸ್ತುಗಳನ್ನು ಒಳಗೊಂಡ ಒಂದು ಮಹಾ ಕಾದಂಬರಿಯಾಗಿರುವುದರಿಂದ, ಆ ವಸ್ತುಗಳಿಗೆ ವಿವರಗಳ ಮೂಲಕ ಜೀವ ತುಂಬುತ್ತದೆ. ಈ

ಹಿನ್ನೆಲೆಯಲ್ಲಿ ಕಾದಂಬರಿಯನ್ನು ಒಂದು ಕಥಾಸಂಕಲನ ಎಂದು ಕೂಡ ಕರೆಯಬಹುದು. ಇದರಲ್ಲಿ ಸ್ವತಂತ್ರವಾಗಿಯೂ ನಿಲ್ಲಬಲ್ಲ ಹಲವಾರು ಕತೆಗಳಿವೆ. ರುಕುಮಾಯಿಯ ಕತೆ. ಅಂಬಕ್ಕನ ಕತೆ. ನಾರಾಯಣನ ಕತೆ. ವಾಸಣ್ಣನ ಕತೆ. ರಾಮುವಿನ ಕತೆ. ಆದರೆ ಈ ಕತೆಗಳೆಲ್ಲವೂ, ಒಂದು ಸೂತ್ರದಲ್ಲಿ ಬಂಧಿತವಾಗುತ್ತವೆ. ಆದ್ದರಿಂದಲೇ 'ಹಳ್ಳಬಂತು ಹಳ್ಳ' ಕಾದಂಬರಿಯು ಹಲವು ವಸ್ತುಗಳನ್ನು ಒಳಗೊಂಡ ಕಾದಂಬರಿ ಹಲವು ಹಲವು ವಸ್ತುಗಳನ್ನು ಏಕೀಭವಿಸುವ ಕಾದಂಬರಿ ಎಂದು ಅನಿಸುತ್ತದೆ.

**೪.೨. ಭಾಷೆ**

ಒಂದು ಸಮುದಾಯದ ಸಂಸ್ಕೃತಿಯನ್ನು ಅರಿಯಬೇಕಾದರೆ ಭಾಷೆ ಅತ್ಯಂತ ಮಹತ್ವಪೂರ್ಣವಾದುದ್ದು. ಅದೇ ರೀತಿ ಒಂದು ಸಾಹಿತ್ಯ ಕೃತಿಯ ಮಹತ್ವವನ್ನು ತಿಳಿಯಬೇಕಾದರೆ ಭಾಷೆ ಪ್ರಮುಖ ಪಾತ್ರವಹಿಸುತ್ತದೆ. ಒಂದು ಸಾಹಿತ್ಯ ಕೃತಿಗೆ ಅದರ ಪ್ರಾದೇಶಿಕ ಭಾಷೆಯ ಬಳಕೆಯಿಂದಲೂ ಮಹತ್ವ ಬರುತ್ತದೆ. ಕನ್ನಡದಲ್ಲಿ ಮಹತ್ವದ ಕಾದಂಬರಿಗಳಾದ ರಾವ್ ಬಹಾದ್ದೂರ ಅವರ 'ಗ್ರಾಮಾಯಣ', ಮಿರ್ಜಿ ಅಣ್ಣಾರಾಯರ 'ನಿಸರ್ಗ' ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಹಾಗೂ 'ಮಲೆಗಳಲ್ಲಿ ಮದುಮಗಳು' ಇವೆಲ್ಲವೂ ತಮ್ಮ ಪ್ರದೇಶದ ಜನರ ಆಡುಮಾತನ್ನು ಅರ್ಥಪೂರ್ಣವಾಗಿ ಬಳಸುವ ಕಾರಣದಿಂದಲೂ ಪ್ರಸಿದ್ಧವಾಗಿವೆ.

ಪ್ರಸ್ತುತ ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯು ಧಾರವಾಡ ಸುತ್ತಲಿನ ಪ್ರದೇಶಗಳಾದ ನರಗುಂದ, ನವಲಗುಂದ, ಯಮನೂರು, ಚಿಲಕವಾಡಿ, ಮೊರಬ, ಇವೆ ಮುಂತಾದ ಪ್ರದೇಶಗಳ ಆಡು ನುಡಿಯ ಭಾಷೆಯ ಸಮರ್ಥ ಬಳಕೆ ಮಾಡಿಕೊಂಡಿದೆ. ಕಾದಂಬರಿಯು ಹಲವಾರು ಪ್ರದೇಶಗಳಲ್ಲಿ ಹಲವಾರು ಕಾಲಘಟ್ಟಗಳಲ್ಲಿ ನಡೆಯುವ ಕಥೆಗಳನ್ನು ಒಳಗೊಂಡಿದೆ. ಹೀಗಾಗಿ ಅದರಲ್ಲಿ ಹಲವಾರು ವಸ್ತುಗಳಿವೆ. ಇದಕ್ಕೆ ತಕ್ಕಂತೆ ಕಾದಂಬರಿಯು ಹಲವು ಬಗೆಯ ಭಾಷೆಗಳನ್ನು ಬಳಸುತ್ತದೆ. ಈ ಕಾದಂಬರಿಯಲ್ಲಿ ಉತ್ತರ ಕರ್ನಾಟಕದ ಭಾಷಾ ಸೊಬಗನ್ನು ಅವರು ಆಡು ಮಾತಿನ ಗದ್ಯ ಲಯವನ್ನು ಕಾದಂಬರಿಯು ತನ್ನ ಸಮೃದ್ಧತೆಯಲ್ಲಿ ನಮಗೆ ಕಾಣಿಸುತ್ತದೆ. ಈ ಕಾದಂಬರಿಯಲ್ಲಿ ಧಾರವಾಡದ ನರಗುಂದ ಮತ್ತು ನವಲುಗುಂದ ತಾಲ್ಲೂಕುಗಳ ಹಳೆಯ ತಲೆಮಾರಿನ ಬ್ರಾಹ್ಮಣರ ಕುಟುಂಬದ ನೋವು ನಲಿವುಗಳ ತಲ್ಲಣಗೊಂಡ ಚಿತ್ರಣವಿದ್ದು, ಪ್ರಮುಖವಾಗಿ ಆ ಸಮುದಾಯದ ಭಾಷೆಯ ಬಳಕೆಯಿದೆ. ಬ್ರಾಹ್ಮಣ ಧಾರ್ಮಿಕ ಆಚರಣೆಗಳು ಮತ್ತು ಸಂಪ್ರದಾಯಗಳು ಇಲ್ಲಿ ಬೇಕಾದಷ್ಟು ಬರುತ್ತವೆ. ಆಗ ಅಲ್ಲಿನ ಭಾಷೆಯನ್ನು ಅದು

ಬಳಸುತ್ತದೆ. ಆದರೆ ಇತರೆ ಸಮುದಾಯಗಳ ಜನರ ಕಥೆಯೂ ಇರುವುದರಿಂದ, ಅವರ ಭಾಷೆಯನ್ನೂ ಅದು ಬಳಸುತ್ತದೆ. ಹೀಗೆ ಕಾದಂಬರಿಯು ಹಲವಾರು ವಸ್ತುಗಳನ್ನು ಹೊಂದಿದ್ದು, ಹಲವಾರು ಸಮುದಾಯಗಳಿಂದ ಬಂದ ಪಾತ್ರಗಳನ್ನು ಹೊಂದಿದ್ದು, ಆಯಾ ಸನ್ನಿವೇಶಕ್ಕೆ ತಕ್ಕಂತೆ ಭಾಷೆಯ ಬಳಕೆಯನ್ನು ಹೊಂದಿದೆ. ಕುವೆಂಪು ಕಾದಂಬರಿಗಳ ಹಾಗೆಯೇಇದು ಬೇರೆಬೇರೆ ಸಮುದಾಯಗಳ ಜೀವನಕ್ರಮವನ್ನು ಮತ್ತು ಆಡುಮಾತಿನ ಬಳಕೆಯನ್ನು ಬಳಸಿರುವ ಕಾದಂಬರಿಯಾಗಿದೆ.

ಶ್ರೀನಿವಾಸ ವೈದ್ಯರು ತಮ್ಮ ಕಾದಂಬರಿಯಲ್ಲಿ ಬಳಸಿರುವ ಭಾಷೆಯು ಪೂರಾ ಗ್ರಾಮೀಣ ಸೊಗಡಿನದಲ್ಲ. ಕಥೆಯು ಪಟ್ಟಣ ಮತ್ತು ನಗರ ಪ್ರದೇಶಗಳಲ್ಲಿ ನಡೆಯುತ್ತದೆ. ಅದರಲ್ಲಿ ಅನೇಕ ಹಿನ್ನೆಲೆಯ ಜನರು ಬರುತ್ತಾರೆ. ಉದಾಹರಣೆಗೆ ರಾಜಕಾರಣಿಗಳು, ಅಧಿಕಾರಿಗಳು, ರೈತರು, ವಕೀಲರು, ಮಹಿಳೆಯರು, ಬ್ರಿಟಿಷರು, ಮುಸ್ಲಿಮರು, ಲಿಂಗಾಯತರು, ಧಾರ್ಮಿಕ ಗುರುಗಳು, ಹೀಗೆ ಹಲವಾರು ಬಗೆಯ ಜನರು ಬರುತ್ತಾರೆ. ಅವರವರ ಭಾಷೆಯನ್ನು ಅದು ತಂದು ಬಳಸುತ್ತದೆ. ಹೀಗಾಗಿ ಕಾದಂಬರಿಯು ಅನೇಕ ಆಡುಭಾಷೆಗಳ ಪ್ರಯೋಗಶಾಲೆಯಂತಿದೆ.

ಆದರೂ ಅದರಲ್ಲಿ ಹೆಚ್ಚು ಬಳಕೆಯಾಗಿರುವುದು ನವಲಗುಂದ ಭಾಗದ ಪ್ರಾದೇಶಿಕ ಭಾಷೆಯೇ. ವೈದ್ಯರ ಕಾದಂಬರಿಯು ಈ ಕಾರಣದಿಂದ ಭಾಷಾಶಾಸ್ತ್ರದ ಅಧ್ಯಯನ ಮಾಡುವವರಿಗೂ ಕೂಡ ಒಂದು ಆಕರಗ್ರಂಥವಾಗಿದೆ. ಬೇರೆ ಪ್ರದೇಶದ ಓದುಗರು ಈ ಕಾದಂಬರಿಯನ್ನು ಓದುವಾಗ ಅರ್ಥವಾಗದ ಅನೇಕ ಶಬ್ದಗಳು ಸಿಗುತ್ತವೆ. ಅನೇಕ ಗಾದೆಗಳನ್ನು, ದ್ವಿರುಕ್ತಿಗಳನ್ನು, ಅನುಕರಣಾವ್ಯಯಗಳನ್ನು, ಮರಾಠಿ ಪದಗಳನ್ನು, ಕೆಲವು ಬೈಗುಳಗಳನ್ನು, ಇಂಗ್ಲೀಷ್ ಪದಗಳನ್ನ, ಸಂಸ್ಕೃತ ಶ್ಲೋಕವನ್ನು ಕಾದಂಬರಿ ಬಳಸುತ್ತದೆ. ಇಷ್ಟೊಂದು ಭಾಷಿಕ ಲಯಗಳನ್ನು ಕಾದಂಬರಿಯಲ್ಲಿ ಬಳಸಿದ ಲೇಖಕರು ನಮ್ಮಲ್ಲಿ ಕಡಿಮೆ. ಶ್ರೀನಿವಾಸ ವೈದ್ಯರು ಪ್ರಾದೇಶಿಕ ಭಾಷೆಯನ್ನು ಕಾದಂಬರಿಯ ಉದ್ದಕ್ಕೂ ಬಳಸಿದ್ದರೂ ಅದು ಸಂವಹನಕ್ಕೆ ತೊಡಕಾಗುವುದಿಲ್ಲ. ಅದು ಅಲ್ಲಿನ ಜೀವನ ಕ್ರಮವನ್ನು ಅರ್ಥಮಾಡಿಕೊಳ್ಳುವುದಕ್ಕೆ ತೊಡಕಾಗುವುದಿಲ್ಲ. ಬದಲಿಗೆ ಅಲ್ಲಿ ಪ್ರಾದೇಶಿಕ ಜೀವನದ ವಿಶಿಷ್ಟತೆಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ನೆರವಾಗುತ್ತದೆ. ಒಟ್ಟಾರೆ ಕಾದಂಬರಿಯಲ್ಲಿರುವ ಭಾಷೆಯ ಬಳಕೆಯು ಕನ್ನಡವನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿ ಸಮರ್ಥ ರೀತಿಯಲ್ಲಿ ಒಬ್ಬ ಪ್ರತಿಭಾವಂತ ಲೇಖಕ ತೊಡಗಿಸಿರುವುದರ ಸಂಕೇತವಾಗಿದೆ. ಕಾದಂಬರಿಯಲ್ಲಿ ಬರುವ ವಿವಿಧ ಭಾಷಿಕ ಪ್ರಯೋಗ ಮತ್ತು ವಿನ್ಯಾಸಗಳನ್ನು ಈಗ ಗಮನಿಸಬಹುದು.

೧. ಪ್ರಮಾಣ ಕನ್ನಡ ನಾಮಪದ ಅಂತ್ಯದ 'ಎ' ಕಾರವು ಇಲ್ಲಿ 'ಇ/ಈ' ಕಾರ ಆಗಿ ಪರಿವರ್ತನೆಯಾಗಿರುವುದು:

*ಮಳೆ > ಮಳೀ*

*ಮುತ್ತೈದೆ > ಮುತ್ತೈದಿ*

*ಮನೆ > ಮನಿ*

*ಸೊಸೆ > ಸೊಸಿ*

*ಅಡಿಗೆ > ಅಡಿಗಿ*

*ಕತೆ> ಕತೀ*

೨. ಕೆಲವು ಶಬ್ದಗಳಲ್ಲಿರು 'ಏ' ಕಾರವು ಯ್ ಮತ್ತು ಅ ಸೇರಿಕೊಂಡು ಪರಿವರ್ತನೆಯಾಗಿರುವುದು

*ಬೇರೆ > ಬ್ಯಾರೆ*

*ಬೇಡ > ಬ್ಯಾಡ*

*ಬೇನೆ > ಬ್ಯಾನಿ*

*ಬೇಸರ > ಬ್ಯಾಸರ*

*ಮನೇಗೆ > ಮನ್ಯಾಗ*

*ಮೇಲೆ > ಮ್ಯಾಲೆ*

*ವೇಳೆ > ವ್ಯಾಳೆ*

*ಪೇಟೆ > ಪ್ಯಾಟಿ*

೩. ವ್ಯಕ್ತಿನಾಮಗಳಲ್ಲಿ 'ಯ್' ಮತ್ತು 'ಆ' ಸೇರಿಕೊಳ್ಳುವುದು.

*ತಿಪ್ಪ > ತಿಪ್ಯಾ*

*ಹುಚ್ಚ > ಹುಚ್ಚ್ಯಾ*

*ಹಣುಮ > ಹಣಮ್ಯಾ*

*ಕೃಷ್ಣ > ಕೃಷ್ಣ್ಯಾ*

*ಬೋಧ > ಬೋಧ್ಯಾ*

*ರಾಘ > ರಾಘ್ಯಾ*

೪. ಕೆಲವು ಶಬ್ದಗಳಲ್ಲಿ ಕೆಲವು ಸ್ವರಗಳು ಮತ್ತು ವ್ಯಂಜನಗಳೂ ಲೋಪವಾಗುವುದು.

*ಬೇಡರಿ > ಬ್ಯಾಡ್ರಿ*

*ಹೇಳರಿ > ಹೇಳ್ರಿ*

*ಬ್ರಾಹ್ಮಣ > ಬ್ರಾಂಬ್ರ*

*ಕೇಳರಿ> ಕೇಳ್ರಿ*

೫. ಮರಾಠಿ ಮತ್ತು ಫಾರಸಿ ಶಬ್ದಗಳು ಬಳಕೆಯಾಗಿರುವುದು.

*ಖರ್ಚು*

*ಜಾಮೀನು*

*ವಕಾಲತ್ತು*

*ರಾಜೀನಾಮೆ*

*ರಿವಾಜು*

*ಸಾಬೀತು*

*ಸಾಹೇಬ*

*ಭರತಿ*

*ವೈನಿ*

*ಕಂದೀಲು*

*ಛಕಾಡಿ*

*ನಜರು –ಇತ್ಯಾದಿ.*

**೬. ದ್ವಿರುಕ್ತಿಗಳು ಬರುವುದು.**

ಶ್ರೀನಿವಾಸ ವೈದ್ಯರು ಕಾದಂಬರಿಯಲ್ಲಿ ಸಂದರ್ಭಕ್ಕೆ ತಕ್ಕಂತೆ ದ್ವಿರುಕ್ತಿ ಪದಗಳನ್ನ ಬಳಸಿದ್ದಾರೆ. ಸನ್ನಿವೇಶದ ಭಾವದ ತೀವ್ರತೆಯನ್ನು ಹೆಚ್ಚಿಸಲು ಈ ದ್ವಿರುಕ್ತಿಗಳು ತುಂಬಾ ಸಹಾಯಕವಾಗಿವೆ. ಇಂತಹ ದ್ವಿರುಕ್ತಿಗಳು ಉತ್ಸಾಹ, ಕೋಪ, ಸಂಭ್ರಮ, ಆಶ್ಚರ್ಯ ಮುಂತಾದ ಸಂದರ್ಭದಲ್ಲಿ ಬಳಕೆಯಾಗುತ್ತವೆ.

ಅ. *"ನಾರಾಯಣ ರಾಮಲಿಂಗನ ಕಾಮನ ಮುಂದೆ ಶೂದ್ರರ ಸಂಗ್ತೀ ಢಮ್... ಢಮ್... ಧಡಮ್ ... ಧಡಮ್ ಅಂತ ಮಸ್ತಾಗಿ ಧುಂದಾಗಿ ಬ್ರಹ್ಮಾಂಡಗಳನ್ನು ಒಡೆಯೋ ಹಂಗ ಅವುಡು ಕಚ್ಚಿ ರಣಹಲಿಗೆ ಬಾರಿಸುತ್ತಿದ್ದ"* (ಪು.೬೭)

ಆ. ಕಾಮನ ಹಬ್ಬದ ಹಲಿಗೀ ರಣಹಲಗಿಗಳ ಸದ್ದು ***"ಢಕ್ ಢಕ್ಕಣಕ್ಕ..... ಢಕ್ ಢಕ್ಕಣಕ್ಕ"*** ಎಂದು ಗಾಳಿಯಲ್ಲಿ ತೇಲಿಬರುತ್ತಿತ್ತು. (ಪು.೬೭)

ಇ. ವಾಸುದೇವಾಚಾರ್ ಒಂದೊಂದೇ ರಾಣಿ ಮುಖದ ಬೆಳ್ಳಿನಾಣ್ಯಗಳನ್ನು ಎದುರಿಗಿಟ್ಟು ಕೊಂಡು ಸಾಣೇಕಲ್ಲ ಮೇಲೆ ಎಸೆದೆಸೆದು ***"ಕಣ್..... ಠಣ್"*** *ಅಂತ ಸದ್ದು ಆಲಿಸುತ್ತಾ ಎಣಿಸಲಿಕ್ಕೆ ಹತ್ತಿದರು.* (ಪು. ೧೨೯)

ಈ. ಇದಾದ ನಂತರ ಬೆಳ್ಳಿ ನಾಣ್ಯಗಳ ***"ಖಟ್ ಖಟ್"*** ಅಂತ ಸದ್ದು ಕೇಳಿಸುತ್ತಿತ್ತು. (ಪು. ೧೨೯)

**೭. ವಿಶಿಷ್ಟವಾದ ಬೈಗುಳ ಇರುವುದು.**

***ಲುಚ್ಚಾ... ಲಫಂಗ..... ಪಾಜಿಬದ್ಮಾಶ್ ... ಹಲ್ಕಟ... ಫಾಜಲ್ ಲಬಾಡ***

ಬೋಧರಾಯಣ ಪ್ರಣಯವನ್ನು ಸಹಿಸಲಾರದ ಕೂಲಿ ಹೆಣ್ಣಾಳುಗಳು ***"ಯಕಲಾನಿನ್ನ ಮಂಜಾಳ ಹೋಗ"*** ಎಂದು ಬೈಯುವುದು.

ವಾಸುದೇವಾಚಾರ್ ಅವರು ಪ್ಲೇಗ್ ರೋಗಕ್ಕೆ ತೀರ್ಥಕೊಡುವ ಸಂದರ್ಭದಲ್ಲಿ ಜನರು ಮುಗಿ ಬೀಳುವುದನ್ನು ಕಂಡು ***"ಇನ್ನ ಮ್ಯಾಲೆ ಹಂಡೇದಾಗ ತೀರ್ಥ ಮಾಡಲೀನರ್‍ಯೋ ರಂಡೇ ಮಕ್ಕಳ್"*** ಎಂಬ ಬೈಯುವುದು (ಪು. ೧೧೪)

**೮. ಕನ್ನಡ ಮರಾಠಿ ಮಿಶ್ರಣವುಳ್ಳ ಸಂಭಾಷಣೆಗಳು.**

***"ಹೊಟ್ಟಿಗೇನು ಶೇಣ್ ಖಾತೂಸ್ ಕಾಯ..... ನಡಿಹೊರಗ ..... ಒಳಗ ಪಾಯ ಠೇವೂ ನಕೋಸ್"***(ಪು. ೧೦೩)

***" ಆತಾ ಬಸ್ ಕರಾಪಾಹು"*** (ಪು. ೧೦೩)

**೯. ಕೆಲವು ಗಾದೆ ಮಾತುಗಳ ಪ್ರಯೋಗ ಇರುವುದು.**

***" ಹೊಳ್ಯಾಗ ಹುಣಶೀಹಣ್ಣು ತೊಳೆದಂತಾಗಿದ್ದವು"*** (ಪು. ೧೬೫)

***"ಅಂತು ಇಂತು ಕುಂತಿ ಮಕ್ಕಳಿಗೆ ರಾಜ್ಯವಿಲ್ಲ"*** (ಪು. ೨೦೧)

***"ನಿತ್ಯ ಸಾಯುವವರಿಗೆ ಅಳೋರ್‍ಯಾರು*** (ಪು. ೧೬೪)

ಮೇಲಿನ ಎಲ್ಲ ನಿದರ್ಶನಗಳು, ಕಾದಂಬರಿಯು ಒಳಗೊಂಡಿರುವ ವಿವಿಧ ಭಾಷಿಕ ವಿನ್ಯಾಸಗಳನ್ನು ಸೂಚಿಸುತ್ತವೆ. ಇದಲ್ಲದೆ, ಬೇರೆಬೇರೆ ಸಮುದಾಯದ ಜನರು ಆಡುವ ಭಾಷೆಯ ವಿನ್ಯಾಸಗಳನ್ನು ಕೂಡ ಇಲ್ಲಿ ನೋಡಬಹುದು. ಉದಾಹರಣೆಗೆ:

**ಅ. ರೈತರ ಭಾಷೆ**

*"ಲಾವಣಿ ದುಡ್ಡು ಕೊಡಲಿಕ್ಕೆ ಬಹಾಳೇ ತ್ರಾಸ ಕೊಟ್ಟ. ಬರುವಾಗ ಅವನ ಜತೆ ಇನ್ನಿಬ್ಬರು ಧಾಂಡಿಗರಾದ ರೈತರು ಬಂದಿದ್ದರು. ಯಲ್ಲರೂ ಕೂಡಿ ಒಂದೇ ರಾಗದಲ್ಲಿ. "ಬೆಳೀನ ಇಲ್ಲದ ಬರೇ ಲಾವಣಿ ಕೊಡಂದ್ರ ಎಲ್ಲಿಂದ ಬರತ್ತೈತ್ರಿ?... ಖರ್ಚೆನು ಕಡಿಮಿ ಅಯಿತೇನ್ರೀ... ಗೊಬ್ಬರ... ಕೂಲೀ... ಕಳೇ ಕೀಳೋದು.. ಬೀಜ.. ಹಪ್ತೇ ಒಂದ ಎರಡ... ನಿಮಗೇನು ತಿಳಿತೈತರಿ ನಮ್ಮ ತ್ರಾಸು.. ಒಮ್ಮಿಂದೊಮ್ಮಿಗಿಲೇ ಅಷ್ಟು ದುಡ್ಡು ಮುಟ್ಟಸ ಅಂದ್ರ ಹ್ಯಾಂಗರೀ..."* ಇತ್ಯಾದಿ ಇತ್ಯಾದಿ ನಾನಾ ವರಸೆಗಳನ್ನು ತೆಗೆದರು. (ಪು.ಸಂ.೧೨೬)

**ಆ. ಧರ್ಮಗುರುಗಳ ಭಾಷೆ**

*"ಮಠ ಅಂದುಕೊಂಡರೆ ಮಠ... ಇಲ್ಲದಿದ್ದರೆ ಒಂದು ದೊಡ್ಡ ದೊಂಬರಾಟ... ಒಮ್ಮೊಮ್ಮೆ ನಮಗೇ ಆಶ್ಚರ್ಯ ಆಗತದ... ನಮ್ಮ ಸಮಾಜ ಬಾಂಧವರನ್ನ ಸ್ವಲ್ಪ ಶಿಸ್ತಿನಲ್ಲಿಡಲು, ಹದ್ದು ಬಸ್ತಿನಲ್ಲಿಡಲು... ಈ ಆಡಂಬರ ಆಟಾಟೋಪ ಎಲ್ಲ ಬೇಕೇ? ಅಂತ... ಆಮ್ಯಾಲ ಅನಸ್ತದ... ಶಿಷ್ಯರು.. ದಿವಾಣರು... ದಿಂಡೇರು... ಆಳುಕಾಳು ಅಂತ ನೂರಾರು ಸಂಸಾರಗಳ ಹೊಟ್ಟೆ ನಡೀ ಬೇಕು... ಜನರ ಶ್ರದ್ಧಾಕ್ಕೂ ಒಂದು ಕೇಂದ್ರಬೇಕು.... ನಾವು ನಮ್ಮವರು ಅಂಬೋ ಭಾವನಾದಿಂದ ಸಮಾಜಕ್ಕೆ ಸ್ವಲ್ಪ ಸ್ಥೈರ್ಯನೂ ಬರತದೋ ಏನೋ?.. ಅಂದಮೇಲೆ ಈ ವೇಷ ಭೂಷಣ ಈ ದೊಂಬರಾಟ ಇದ್ದದ್ದ.."* ಎಂದರು.

ಇಲ್ಲಿ ಮಠದ ಗುರುಗಳು ವಾಸಣ್ಣನನಿಗೆ ಹೇಳುವ ಮಾತುಗಳನ್ನು ಉಲ್ಲೇಖಿಸು

**ಇ. ಅಧಿಕಾರಿಯ ಭಾಷೆ**

*'ರಾಮಚಂದ್ರ ಪಂತ ಯಾರು, ನಿಮಗೇನಾಗಬೇಕು'* ಎಂದೆಲ್ಲ ಕೇಳಿ ಆಮೇಲೆ *'ಹುಡುಗನ ಮ್ಯಾಲ ಸ್ವಲ್ಪ ಕಣ್ಣಿಡರಿ, ಬೆಳಗಾವಿಯೊಳಗ ಬಾಂಬ ಮಾಡೋ ಮಂದೀ ಗುಂಪಿನ್ಯಾಗ ಇದ್ದಾನ ಅಂತ ಸುದ್ದಿ ಬಂದೈತಿ. ಅದಕ್ಕ ಏನ್‌ಕ್ವಾಯರೀ ಮಾಡಾಕ ಬಂದೇವಿ'* ಎಂದು ಪಿಸು ದನಿಯಲ್ಲಿ ಹೇಳಿ ಹೋದರು.

ಎಂದು ಪೊಲೀಸರು ವಾಸುದೇವಚಾರ್ಯರನ್ನು ಒಳಗೆ ಕರೆದು ಕೇಳುತ್ತಾರೆ.

### ಈ. ಮಹಿಳೆಯರ ಭಾಷೆ

*ಅಂತಂಭಟ್ಟನ ಹೆಂಡತಿ ಗೋದೂಬಾಯಿ, ಕುಲಕರ್ಣಿ ರಂಗಣ್ಣನ ಸೊಸಿ ಸಾವಿತ್ರಿ, ದೇಶಪಾಂಡೇರ ಅಕ್ಕವ್ವ, ಕುಷ್ಟಿಗಿ ಕ್ರಿಷ್ಟ್ಯಾನ ಹೆಂಡತಿ ಸುಂದರಕ್ಕ ಯಲ್ಲಾರೂ ಹರಿಹಾಯ್ದಿದ್ದರು. ಒಬ್ಬಾಕಿ "ಅಯ್ಯ ಮಾಡನ್ನ ಮಹಾರಾಯಳ... ಬೇಕಾದಷ್ಟು ಹಾಸಿಗಿ ಪಥ್ಯಾ ಮಾಡನ್ನು... ಯಾರಿಗೆ ಬೇಕಾಗೇದ ಈ ವರಪಾ ವರಪಾ ಬಸರು ಬಾಣಂತನ... ನಮಗ ಬೇಕಾಗೇದೇನು?" ಅಂದರ ಇನ್ನೊಬ್ಬಾಕಿ " ಕತ್ತೀ ಹಂಗ ಮೈಮಾಲ ಬೀಳತಾವ... ಮತ್ತ ಪಥ್ಯೆ ಅಂತ ಪಥ್ಯೆ" ಎಂದಲು ತಿರಸ್ಕಾರದಲ್ಲಿ ಇನ್ನೊಬ್ಬ ಹಿರಿಯು " ಬಡಿಯೊ ಕೈಲೇ ಹತ್ತ ಭಕ್ಕರೀ ಹೆಚ್ಚು ಬಡೀ, ಹಡಿಯೊ ಕೈಲೆ ನಾಲ್ಕು ಮಕ್ಕಲನ್ನು ಹೆಚ್ಚು ಹಡೀ ಅಂತಗಾದೀ ಮಾತ ಅದ ಅಲ್ಲ... ಹುಟ್ಟಿಸಿದ ದೇವರು ಹುಲ್ಲು ಮೇಯಿಸತಾನೇನು?"* ಎಂದಳು. ಈ ರೀತಿ ಪಂತರ ಮನೆಯ ಹೆಣ್ಣುಮಕ್ಕಳಷ್ಟೇ ಅಲ್ಲದೇ, ಇಡೀ ನವಲಗುಂದದ ಸ್ತ್ರೀ ಸಮಾಜವೇ ವಾಸುದೇವಾಚಾರ್ಯರ ವಿರುದ್ಧ ಯುದ್ಧ ಸಾರಿತ್ತು. ಇಲ್ಲಿ ವಾಸಣ್ಣನ ತಿಪ್ಪಕ್ಕ ಕುರಿತಾಡುವ ಮಾತಿಗೆ ಮಹಿಳೆಯರು ಟೀಕಿಸುವ ಭಾಷೆಯಾಗಿದೆ.

### ಉ. ನಾಟಕದ ಭಾಷೆ

*ಒಮ್ಮೆ ಕಾಲಿಗೆ ನೀರುಕ ತರಲಿಕ್ಕೆ ತಡಾ ಆತು ಅಂತ, "ಪರಮ ಪತಿವ್ರತೆಯಂತೆ ಪತಿಯ ಪಾದಗಳನ್ನೇ ಪಾವನವೆಂದು ಪರಿಗಣಿಸದೇ, ಪತಿ ಪರಾಂಗ್ ಮುಖಳಾಗಿ ಪತಿತಳಾಗುವೆಯಾ?" ಎಂದರು. ಇನ್ನೊಮ್ಮೆ ಅನ್ನದಲ್ಲಿ ಕಲ್ಲು ಬಂತೆಂದು, "ಪತಿ ಪ್ರಾಣತೆಗೆದು ಪರಂಧಾಮಕ್ಕಟ್ಟಲು ಈ ಪಾಷಾಣದ ಪಾತ್ರ ಗೌಣ, ಅದಕ್ಕೆ ಮೂಷಕ ಪಾಷಾಣವೇ ಪ್ರಶಸ್ತವಲ್ಲವೇ ಪ್ರಿಯೇ?" ಎಂದರು ಮತ್ತೊಮ್ಮೆ ಸರಸ್ವತಿ ಬೋಧರಾಯರಿಗೆ ಸ್ನಾನಕ್ಕೆ ನೀರು ಹಾಕುವಾಗ ಕೈತಪ್ಪಿ ತಂಬಿಗೆ ತಲೆಗೆ ಬಡಿದಾಗ, "ತಂಬಿಗೆಯಿಂದ ಹೊಡೆದರೆ ತಲೆ ತುಂಡಾದೀತೆ ತರಳೆ? ಆ ಹಾರಿಕೋಲು ತೊಗೊಂಡು ಜಜ್ಜು, ಆಗ ವೈಧವ್ಯ ಪ್ರಾಪ್ತಿಯ ನಿನ್ನ ಹೊಂಗನಸು ಬೇಗನೇ ಕೈಗೊಡೀತು"* ಎಂದರು. ಈ ರೀತಿ ಭಾಷಾ ಸಾಮರ್ಥ್ಯದ ಹೊಳೆಯನ್ನು ಹರಿಸಿದೆ.

ಈ ಮೇಲೆ ಕಾಣಿಸಿದ ಮಾತುಕತೆಗಳು ಕಾದಂಬರಿಯ ಕನ್ನಡ ಭಾಷೆಯನ್ನು ಹೇಗೆ ವಿವಿಧ ಸನ್ನಿವೇಶಗಳಿಗೆ ಅನುಸಾರವಾಗಿ ಅರ್ಥಪೂರ್ಣವಾಗಿ ಬಳಕೆ ಮಾಡುತ್ತದೆ ಎಂಬುದು ತಿಳಿಯುತ್ತದೆ. ಶ್ರೀನಿವಾಸ ವೈದ್ಯರ ಕಾದಂಬರಿಯು ತನ್ನ ಕಥೆಯ ವಸ್ತುವಿನಿಂದ ಮಾತ್ರವಲ್ಲದೆ, ತನ್ನ ಭಾಷಾ ಬಳಕೆಯಿಂದಲೂ ಮಹತ್ವವನ್ನು ಪಡೆದಿದೆ.

## ೪.೩. ಶೈಲಿ ಅಥವಾ ಕಥನ ಕ್ರಮ

ಈ ಕಾದಂಬರಿಯನ್ನು ಇನ್ನೊಂದು ಯಶಸ್ಸು ಇರುವುದು ಇದರ ಕಥನ ಕ್ರಮದಲ್ಲಿ. ಕಾದಂಬರಿಯು ನಿರ್ಲಿಪ್ತವಾದ ಭಾವಾವೇಶವಿಲ್ಲದ ನಿರೂಪಣೆಯ ಕಥನಕ್ರಮವನ್ನು ಅನುಸರಿಸುತ್ತದೆ. ಇದರಿಂದ ಯಾವುದೇ ಪಾತ್ರದ ಪರವಾಗಿ ಅಥವಾ ವಿರುದ್ಧವಾಗಿ ಅದು ನಿಲುವನ್ನು ತಳೆಯುವುದಿಲ್ಲ. ಅದರ ಎಲ್ಲ ಗುಣದೋಷಗಳನ್ನು ಚಿತ್ರಿಸಲು ಇದರಿಂದ ಸಾಧ್ಯವಾಗಿದೆ. ವಾಸಣ್ಣನು ಈ ಕಾದಂಬರಿಯ ಮುಖ್ಯ ಪಾತ್ರ, ಆದರ್ಶವಾದಿ ಪಾತ್ರ, ಆದರೆ ಆತ ಕೂಡ ಅನೇಕ ಸಂದರ್ಭಗಳಲ್ಲಿ ಸಂಕುಚಿತವಾಗಿ ವರ್ತಿಸುವುದನ್ನು ಚಿತ್ರಿಸಲು ಕಾದಂಬರಿ ಹಿಂಜರಿಯುವುದಿಲ್ಲ. ಇದು ಕಾದಂಬರಿ ಅನುಸಿರಿಸಿರುವ ವಾಸ್ತವವಾದಿ ಕಥನಕ್ರಮದಿಂದ ಸಾಧ್ಯವಾಗಿದೆ. ಈ ಕಥನಕ್ರಮವು ಕುವೆಂಪು, ಶಂಕರಮೊಕಾಶಿ ಪುಣೇಕರ, ರಾವ್ ಬಹಾದ್ದೂರ ಮುಂತಾದವರು ಈಗಾಗಲೇ ಯಶಸ್ವಿಯಾಗಿ ಬಳಸಿರುವರು. ಅದೇ ಪರಂಪರೆಯಲ್ಲಿ ವೈದ್ಯರು ಕೂಡ ಸಾಗಿ ದೊಡ್ಡ ಯಶಸ್ಸನ್ನು ಪಡೆದಿರುವರು.

ಕಾದಂಬರಿಯು ಅನುಸರಿಸಿರುವ ಇನ್ನೊಂದು ಕಥನಕ್ರಮವೆಂದರೆ, ವಿನೋದಪೂರ್ಣವಾದ ಕಥನಕ್ರಮ. ಇಡೀ ಕಾದಂಬರಿ ಇದರಿಂದ ಸಂತೋಷದಿಂದ ಓದುವ ಗುಣವನ್ನು ಪಡೆದುಕೊಂಡಿದೆ. ಎಲ್ಲಿಯೂ ಬೋರ್ ಬರಿಸುವುದಿಲ್ಲ. ಅದರಲ್ಲೂ ಬೋಧರಾಯನ ಪಾತ್ರ ಬಂದಾಗ ಕಾದಂಬರಿಯ ವಿನೋದಪೂರ್ಣ ನಿರೂಪಣಕ್ರಮವು ಸಮರ್ಥವಾಗಿ ವ್ಯಕ್ತವಾಗುತ್ತದೆ.

**ಉದಾ:** ಬೋಧರಾಯನು ತಾಲೂಕು ಕಛೇರಿಯಲ್ಲಿ ಕೆಲಸ ಮಾಡುವ ವಿಧಾನಗಳು

*ವ್ಯವಹಾರಕ್ಕೆ ಬರುವ ಅಶಿಕ್ಷಿತ ರೈತಾಪಿ ಹೆಣ್ಣು ಮಕ್ಕಳಿಂದ ಕಾಗದಗಳ ಮೇಲೆ ಹೆಬ್ಬೆಟ್ಟು ಒತ್ತಿಸುವದರಲ್ಲಿ ಬೋಧರಾಯರಿಗೆ ಎಲ್ಲಿಲ್ಲದ ಈಶ್ವರೀ ಸಂತೋಷ ಪ್ರಾಪ್ತವಾಗುತ್ತಿತ್ತು. ಸ್ವಲ್ಪ ದೇಖಾವೆಯಾಗಿದ್ದ ಹರೆಯದ ಹೆಣ್ಣುಮಕ್ಕಳ ಕರವನ್ನು ತಮ್ಮ ಕೈಯಲ್ಲಿ ತಕ್ಕೊಂಡು, ಧೂಳುಝಾಡಿಸುವ ನೆವದಿಂದ ಆ ಕೋಮಲ ಹಸ್ತವನ್ನು ಸವರಿ, ತಟ್ಟಿ, ಹೆಬ್ಬೆಟ್ಟನ್ನು ತುಟಿಯ ಬಳಿ ಒಯ್ದು ಊದಿ, ಮಶಿಯಲ್ಲಿ ಅದ್ದಿ ಕಾಗದದ ಮೇಲೆ ಒತ್ತಿ ಹಿಡಿದು ಹಿಂದೊಮ್ಮೆ ಮುಂದೊಮ್ಮೆ ಆಡಿಸುವಾಗ ಬೋಧರಾಯರು ತುರೀಯ ಅವಸ್ಥೆಯನ್ನೇ ತಲುಪಿರುತ್ತಿದ್ದರು. "ಯಲ್ಲವ್ವಾ ಕೊಂ ಶಂಕರಪ್ಪಾ', 'ಚನ್ನವ್ವಾ ತಂದಿ ಮಲ್ಲಪ್ಪ" "ರುದ್ರವ್ವ ಕೋಂ. ಈರಭದ್ರಪ್ಪಾ"* ಎಂದು ನಾಲಿಗೆಯಲ್ಲಿ ಈ ಮಹಿಳಾ ಮಣಿಗಳ ಹೆಸರುಗಳನ್ನು ಹೊರಳಾಡಿಸುತ್ತ, ಹೆಬ್ಬೆಟ್ಟು ಒತ್ತಿಸುತ್ತಿರುವಾಗ, ಆ

ಯಲ್ಲವ್ವನೋ, ಚನ್ನವ್ವನೋ, *'ಯವ್ವಾ ಏನಮಾಡತೇತೆ ಈ ಗಂಡಮಗ"* ಎಂದು ಅಚ್ಚರಿ ಬಡುತ್ತ ಮುಗುಳುನಗು ನಕ್ಕರೆ, ಬೋಧರಾಯರಿಗೆ ಸ್ವರ್ಗಸುಖ.

ಉದಾ: ಬೋಧರಾಯನು ತನ್ನ ತಾರುಣ್ಯದಲ್ಲಿ ಪ್ರಣಯಚೇಷ್ಟೆಗಳನ್ನು ಮಾಡುವ ವಿಧಾನ.

ಬೇಸಿಗೆಯಲ್ಲಿ ಯಾಕೋ ಬೋಧರಾಯರಿಗೆ, ಹತ್ತಿ ಭಕಡಿ, ಹತ್ತಿ ಅಂಡಿಗೆ ಇವುಗಳಲ್ಲಿ ಆಸ್ಥಾ ಉಳಿದಿರಲಿಲ್ಲ. ಈಗೀಗ ಅವರ ಮನಸ್ಸು ಇನ್ನೆಲ್ಲೋ ಓಡುತ್ತಿತ್ತು. ಎಲ್ಲೆಲ್ಲೋ ಓಡುತ್ತಿತ್ತು. ತಲೆಯ ಮೇಲೆ ದೈತ್ಯಾಕಾರದ ಹತ್ತಿಯ ಗಂಟುಗಳನ್ನು ಹೊತ್ತ ಕಟ್ಟು ಮಸ್ತಾದ ಕೂಲಿ ಹೆಣ್ಣಾಳುಗಳು ಹೆಜ್ಜೆಗೊಮ್ಮೆ ಇಡೀ ಮೈಕುಣಿಸುತ್ತ ಮಣಿಸುತ್ತ ತಾಲ ಬದ್ಧವಾಗಿ ನಡೆದಿರುತ್ತದ್ದ ಆ ಮೋಹಕ ನೋಟ ಬೋಧರಾಯರ ಹೊಸ ಹರೆಯದ ಕಣ್ಣುಗಳಿಗೆ ಕರದಂಟಿನಕ್ಕಿಂತ ಹೆಚ್ಚು ಮೋಹಕವಾಗಿ ಕಂಡಿದ್ದರೆ ಅದು ಆ ವಯಸ್ಸಿನ ಸಹಜ ಮಹಿಮೆ. ಆದರೆ ಬೋಧರಾಯರಲ್ಲಿ ವಯಸ್ಸಿನ ಈ ಮಹಿಮೆ, ಸಹಜಕ್ಕಿಂತ ಸ್ವಲ್ಪ ಹೆಚ್ಚಾಗಿಯೇ ಇತ್ತೋ ಏನೋ? ಈಗ ಬೋಧರಾಯರು ನಿತ್ಯ ಮಧ್ಯಾಹ್ನ ಲಾಲಗಡಿ ಅಚಿಜನೇಯ ದೇವಸ್ಥಾನದ ಆಚೆ ನರಗುಂದ ರಸ್ತೆಯ ಮೇಲೆ ಕಟ್ಟಿದ ಒಂದು ಚಿಕ್ಕ ಸೇತುವೆಯ ಮೇಲಿನ ಕಟ್ಟೆಗೆ ಕುಳಿತು. ಸಂಜೆಯವರೆಗೆ ಈ ಹತ್ತೀ ಲಲನೆಯರ ಹಿಂಭಾಗದ ಲಯಭದ್ದ ನಾಟ್ಯವನ್ನು ಬುಭುಕ್ಷು ನೇತ್ರಗಳಿಂದ ಹೀರಿಕೊಳ್ಳುತ್ತ ಕನಸ್ಸುಗಣ್ಣಿಗರಾಗಿ ಕುಳಿತು ಬಿಡುತ್ತಿದ್ದರು.

ಈ ವಿನೋದಮಯ ಧಾಟಿಯಿಂದ ಕಾದಂಬರಿಗೆ ಬಾಳಿನ ಎಲ್ಲ ಸಣ್ಣಮುಟ್ಟ ಸಂಗತಿಗಳತ್ತ ಗಮನ ಹರಿಸಲು ಸಾಧ್ಯವಾಗಿದೆ. ತೇಜಸ್ವಿಯವರು ದೇವನೂರ ಮಹಾದೇವ ಅವರೂ ಕುಂವೀಯವರೂ ಕುವೆಂಪು ಅವರೂ ಈ ವಿನೋದಪೂರ್ಣ ಶೈಲಿಯಿಂದ ಅಪಾರವಾದ ಓದುಗರನ್ನು ಪಡೆದಿರುವುದು ನಮಗೆಲ್ಲ ತಿಳಿದಿದೆ. ಅದೇ ವಿಧಾನದಲ್ಲಿ ಶ್ರೀನಿವಾಸ ವೈದ್ಯರು ಕೂಡ ಓದುಗರ ಮನ್ನಣೆಯನ್ನು ತಮ್ಮ ಈ ಬಗೆಯ ಶೈಲಿಯಿಂದ ಪಡೆದಿರುತ್ತಾರೆ.

ವೈದ್ಯರಿಗೆ ವಿನೋದದ ಭಾಷೆಯನ್ನು ಬಳಸುವುದಕ್ಕೆ ಒಂದು ಕಾರಣವಿದೆ. ಅದೆಂದರೆ, ಅವರು ಈ ಕಾದಂಬರಿ ಬರೆಯುವ ಮುನ್ನ, ಹರಟೆ ಅಥವಾ ಹಾಸ್ಯ ಲೇಖನಗಳ ಲೇಖಕರಾಗಿದ್ದುದು. ಅಲ್ಲಿ ಅವರಿಗೆ ದಕ್ಕಿರುವ ಕುಶಲತೆಯು ಈ ಕಾದಂಬರಿಯಲ್ಲಿಯೂ ಬಳಕೆಯಾಗಿದೆ. ಆದರೆ ಇಲ್ಲಿ ವೈದ್ಯರು ಹಾಸ್ಯವನ್ನು ಒಂದು

ನಿಯಂತ್ರಣದಲ್ಲಿಟ್ಟು ಬಳಸುತ್ತಾರೆ. ಇದರಿಂದ ಕಾದಂಬರಿಯ ಗಂಭೀರತೆಗೆ ಏನೂ ಧಕ್ಕೆಯಾಗಿರುವುದಿಲ್ಲ.

ವೈದ್ಯರು ಯಾವುದೇ ಘಟನೆಯನ್ನು ನೇರವಾಗಿ ಕಾದಂಬರಿಯಲ್ಲಿ ಚಿತ್ರಿಸುತ್ತಾರೆ. ಕಾದಂಬರಿಕಾರರೇ ನೇರವಾಗಿ ಕಥೆಯನ್ನು ನಿರೂಪಿಸುವ ತಂತ್ರವನ್ನು ಬಳಸಿಕೊಂಡಿರುವುದರಿಂದ, ಮನುಷ್ಯ ಸಂಬಂಧಗಳಲ್ಲಿ ಆತ್ಮೀಯತೆಯನ್ನು, ಭಾಷೆಗಳಲ್ಲಿ ವೈವಿಧ್ಯತೆಗಳನ್ನು ಸಮ ಎನಿಸುವಂತೆ ತರಲು ಸಾಧ್ಯವಾಗಿದೆ.

'ಹಳ್ಳ ಬಂತು ಹಳ್ಳ' ಕಾದಂಬರಿಯು ೧೯ನೇ ಶತಮಾನದಿಂದ ಆರಂಭವಾಗುತ್ತದೆ. ಉತ್ತರದ ಕಾನ್ಪುರದಿಂದ ಬಂದ ಕಮಲಯ್ಯನು ಇಲ್ಲಿನ ಸಂಪ್ರದಾಯಗಳಿಗೆ ಹೊಂದಿಕೊಂಡು ಒಂದು ದೊಡ್ಡ ಕುಟುಂಬಕ್ಕೆ ಮೂಲಪುರುಷನಾಗಿ ರೂಪುಪಡೆಯುವುದರಿಂದ ಕಾದಂಬರಿ ಎಳೆ ಎಳೆಯಾಗಿ ಬಿಚ್ಚಿಕೊಳ್ಳುತ್ತ ಹೋಗುತ್ತದೆ.

ಎರಡನೆಯ ತಲೆಮಾರಿನಲ್ಲಿ ಅವನ ಮಕ್ಕಳಾದ ವೆಂಕಣ್ಣಾಚಾರ್ ಮತ್ತು ವಾಸುದೇವಾಚಾರ್ ಅವರ ಕುಟುಂಬಗಳು ರೂಪುಪಡೆಯುತ್ತವೆ. ಇದು ೧೯ನೇ ಶತಮಾನದ ಕೊನೆಯ ಭಾಗ ಮತ್ತು ೨೦ನೇ ಶತಮಾನದ ಮೊದಲ ಭಾಗದಲ್ಲಿ ಬರುವ ತಲೆಮಾರು. ಇನ್ನು ಮೂರನೆಯದಾಗಿ ಇವರ ಮಕ್ಕಳದು, ೨೦ನೇ ಶತಮಾನದ ಮೊದಲಾರ್ಧದಲ್ಲಿ ಆರಂಭವಾಗಿ ಸ್ವಾತಂತ್ರ್ಯಾನಂತರ ಕೂಡ ಮುಂದುವರೆಯುವ ತಲೆಮಾರು. ಈ ಮೂರು ತಲೆಮಾರುಗಳು ಸಂಪ್ರದಾಯ ಮತ್ತು ಆಧುನಿಕತೆಯ ವಿಷಯದಲ್ಲಿ ಬೇರೆಬೇರೆ ನಿಲುವನ್ನು ಹೊಂದಿರುವಂತಹುದು. ಪ್ರತಿ ತಲೆಮಾರಿನ ಬದುಕಿಗೂ ಸಂಬಂಧಪಟ್ಟಂತೆ, ಕಾದಂಬರಿಯ ಭಾಷೆ ಮತ್ತು ನಿರೂಪಣ ಕ್ರಮಗಳು ಸೂಕ್ಷ್ಮವಾಗಿ ಬದಲಾಗುತ್ತ ಹೋಗುತ್ತವೆ.

ಕಾದಂಬರಿಯು ಯಾವುದೇ ಸಮುದಾಯದ ಬಗ್ಗೆ ಮಮಕಾರ ಮತ್ತು ಪೂರ್ವಗ್ರಹವನ್ನು ಹೊಂದಿಲ್ಲ. ಅದು ಎಲ್ಲ ಸಮುದಾಯಗಳ ಬಗ್ಗೆ ಒಂದು ಬಗೆಯ ವಸ್ತುನಿಷ್ಠ ಧೋರಣೆಯನ್ನು ಹೊಂದಿದೆ. ಇಲ್ಲಿ ಬ್ರಾಹ್ಮಣ ಕುಟುಂಬವೊಂದು ಕಾದಂಬರಿಯ ಕೇಂದ್ರದಲ್ಲಿದೆ. ಹೀಗಾಗಿ ಸಹಜವಾಗಿ ಬ್ರಾಹ್ಮಣರ ಜೀವನ ಕ್ರಮವು ಪ್ರಧಾನವಾಗಿ ಬಂದಿದೆ. ಆದರೆ ಅಲ್ಲಿಯೂ ನೀಚರು, ಸಂಪ್ರದಾಯ ಸಂಕುಚಿತರು, ದುಷ್ಟರು ಕುರಿತು ನಿಷ್ಠುರವಾಗಿ ಚಿತ್ರಿಸುತ್ತದೆ. ಇದರಿಂದ ಬ್ರಾಹ್ಮಣರು ಶೋಷಕರು ಉಳಿದ ಕೆಳಜಾತಿಯವರು ಶೋಷಿತರು ಎಂಬ ಸಮೀಕರಣವು ಇಲ್ಲಿ

ಒಡೆದುಹೋಗುತ್ತದೆ. ಕನ್ನಡದಲ್ಲಿ ಜನಪ್ರಿಯವಾಗಿರುವ ಈ ವೈಚಾರಿಕ ಸಿದ್ಧಗ್ರಹಿಕೆಯನ್ನು ಕಾದಂಬರಿಯು ತನ್ನ ನಿರೂಪಣ ಕ್ರಮದಿಂದಲೇ ಬದಲಿಸುತ್ತದೆ. ಮೇಲುಜಾತಿಯವರು ಸಹ ವರ್ಗದ ಪ್ರಶ್ನೆ ಬಂದಾಗ ಅಪಮಾನಿತ ಭಾವದಿಂದ ನರಳುವುದನ್ನು ಕಾದಂಬರಿ ಚಿತ್ರಿಸುತ್ತದೆ. ಮೊರಬದ ರೈತ ಮಹದೇವಪ್ಪನು ವಾಸುದೇವಾಚಾರ್ಯರಿಗೆ ಉದ್ಧಟತನದಿಂದ "ನಿಮಗೇನು ಹಾರೂರಿಗೆ ಮನ್ಯಾಗ ಕೂತು ತಿಂತೀರಿ ದುಡಿಲಿಲ್ಲ ದುಕ್ಕ ಬಿಡಲಿಲ್ಲ..... ಮಳೀ ಬೆಳೀ ಇಲ್ಲದಿದ್ದರ ಲಾವಣಿ ಎಲ್ಲಿಂದ ಕೊಡೊದು....."ಎಂದು ಗದರುತ್ತಾನೆ. ಇದರಿಂದ ವಾಸುದೇವಾಚಾರ್ಯರು ನೊಂದುಕೊಳ್ಳುತ್ತಾರೆ. ಇಂತಹ ಚಿತ್ರಗಳನ್ನು ಕಾದಂಬರಿಯು ತನ್ನ ಸಹಜ ಮತ್ತು ನಿರ್ಲಿಪ್ತವಾದ ಕಥನ ಕ್ರಮದಿಂದ ತರುತ್ತದೆ.

ಕಾದಂಬರಿಯಲ್ಲಿ ಹಲವು ಭಾಷಿಕ ಸಮುದಾಯಗಳು ಬರುತ್ತವೆ. ಉರ್ದು ಮಾತಾಡುವವರು, ಇಂಗ್ಲೀಷರು, ಮರಾಠಿ ಮಾತಾಡುವವರುಇತ್ಯಾದಿ. ಈ ಮೂರು ಭಾಷೆಗಳು ಸಂದರ್ಭಕ್ಕೆ ಅನುಸಾರವಾಗಿ ಕನ್ನಡದಲ್ಲಿ ಹದವಾಗಿ ಮಿಶ್ರಗೊಳ್ಳುತ್ತವೆ. ಬೈಗುಳ, ಗಾದೆಗಳು ಮಿಶ್ರಗೊಳ್ಳುತ್ತವೆ. ಹೀಗೆ ಕಾದಂಬರಿಯು ತನ್ನ ಕಥನಕ್ರಮದಲ್ಲಿ ಅನೇಕ ನಮೂನೆಯ ಭಾಷಿಕ ವಿನ್ಯಾಸಗಳನ್ನು ಬಳಸಿಕೊಂಡಿದೆ. ಇದನ್ನು ಶ್ರೀನಿವಾಸ ವೈದ್ಯರು ಪ್ರಕಟಿಸಿರುವ ಭಾಷಿಕ ಪ್ರತಿಭೆ ಎಂದು ಕರೆಯಬಹುದು.

ಧರ್ಮದ ಹೆಸರಿನಲ್ಲಿ ನಮ್ಮ ಸಮಾಜವನ್ನು ವಿಭಜಿಸಿ ನೋಡುವ ಸಿದ್ಧಾಂತವು ನಮ್ಮಲ್ಲಿ ಇದೆಯಷ್ಟೆ. ಆದರೆ ಈ ಕಾದಂಬರಿಯು ಎಲ್ಲಾ ಧರ್ಮದವರು ಒಂದುಗೂಡಿ ದೇಶದ ಸ್ವಾತಂತ್ರ ಸಂಗ್ರಾಮದಲ್ಲಿ ಪಾಲ್ಗೊಂಡಿರುವುದನ್ನು ಚಿತ್ರಿಸುವ ಉದ್ದೇಶ ಹೊಂದಿದೆ. ಹೀಗಾಗಿ ಅದರ ಕಥನ ಕ್ರಮದಲ್ಲಿ ಎಲ್ಲ ಧರ್ಮದ ಜನರ ಬಗ್ಗೆಯೂ ಒಂದು ಪೂರ್ವಗ್ರಹವಿಲ್ಲದ ದೃಷ್ಟಿಕೋನವಿದೆ. ಹೀಗಾಗಿ ಇಲ್ಲಿ ಬ್ರಿಟಿಷರ ವಿರುದ್ಧದ ಹೋರಾಟವು ಒಂದು ಸೆಕ್ಯುಲರ್ ನೆಲೆಯ ಹೋರಾಟವಾಗಿದೆ. ಸಂಪ್ರದಾಯವಾದಿ ಮನೆಯಿಂದ ಬಂದ ಹುಡುಗನಾದ ರಾಮು, ಊರಿನ ಎಲ್ಲ ಜಾತಿಯ ಜನರ ಜತೆ ಬೆರೆತು ಹೋರಾಟ ಮಾಡುತ್ತಾನೆ. ಅವನಿಗೆ ಜಾತಿಯ ಮಡಿಮೈಲಿಗೆ ಕಲ್ಪನೆಯಿಲ್ಲ. ಎಲ್ಲ ಜನರ ಪರವಾದ ಹೋರಾಟಗಳು ಜಾತಿ ಧರ್ಮದ ಕಟ್ಟುಪಾಡನ್ನು ಮೀರುತ್ತವೆ ಎಂದು ಕಾದಂಬರಿ ಈ ಮೂಲಕ ಸೂಚಿಸುತ್ತಿರಬಹುದು. ಈ ಬಗೆಯ ಉದಾರವಾದಿ ಮನೋಭಾವಕ್ಕೆ ಪೂರಕವಾಗಿ ಕಾದಂಬರಿಯು ಎಲ್ಲರ ಬದುಕಿನ ಬಗ್ಗೆ ಕಾಳಜಿಯನ್ನು ವ್ಯಕ್ತಪಡಿಸುವಂತಹ ಕಥನಕ್ರಮವನ್ನು ರೂಢಿಸಿಕೊಂಡಿದೆ. ಹೀಗಾಗಿಯೇ ವೆಂಕಣ್ಣಚಾರ್ಯನು ಉಪಪತ್ನಿಯಾಗಿ

ಇಟ್ಟುಕೊಂಡು ಮುಸ್ಲಿಮ್ ಮಹಿಳೆಯ ದುಃಖವನ್ನು ಅದು ಕಾಳಜಿಯಿಂದ ಚಿತ್ರಿಸುವಂತಾಗಿದೆ. ಇದನ್ನು ಸೆಕ್ಯುಲರ್ ದೃಷ್ಟಿಕೋನ ಎಂದು ಕರೆಯಬಹುದು. ಬ್ರಾಹ್ಮಣ ಕುಟುಂಬದ ಕಥೆಯನ್ನು ಹೇಳುವ ಕಾದಂಬರಿಯು ಸಹಜವಾಗಿ ಅದೇ ಜಾತಿಯ ಒಳಗೆ ನಡೆಯುವ ಮದುವೆಯ ವಿವರಗಳನ್ನು ಕೊಡುತ್ತದೆ. ಆದರೆ ಜಾತಿಯೊಳಗೆ ಆಗುವ ಲಗ್ನಗಳು ಹೇಗೆ ಭೀಕರ ದುರಂತಗಳಾಗಿ ಮುಗಿಯುತ್ತದೆ ಎಂಬುದನ್ನು ಸೋನಿಯ ಮದುವೆಯ ಪ್ರಕರಣದಲ್ಲಿ ಅದು ತರುತ್ತದೆ. ಆದರೆ ಸಂಪ್ರದಾಯವಾದಿ ಬ್ರಾಹ್ಮಣ ಕುಟುಂಬದ ಹುಡುಗರು, ಮುಂಬಯಿಗೆ ಹೋಗಿ ಅಲ್ಲಿನ ಸಂಸ್ಕೃತಿಗೆ ಮಾರ್ಪಾಡುಹೊಂದಿ ಅಲ್ಲಿಯೇ ಒಂದು ಅನ್ಯ ಪಂಗಡದ ಹುಡುಗಿಯನ್ನ ವಿವಾಹವಾಗುವುದು ಅದು ಯಾವುದೇ ಕಹಿಯಿಲ್ಲದೆ ಚಿತ್ರಿಸುತ್ತದೆ. ಮಾತ್ರವಲ್ಲ ಇಂತಹ ಜಾತಿಹೊರಗಿನ ವಿವಾಹಗಳು ಉತ್ತಮ ಸಂಸಾರಕ್ಕೆ ಕಾರಣವಾಗಿರುವುದನ್ನು ಕೂಡ ಅದು ಚಿತ್ರಿಸುತ್ತದೆ. ಜಾತಿಮೀರಿದ ನಾರಾಯಣನ ಮದುವೆಯು ಘನತೆಯ ಜೀವನಕ್ಕೆ ಕಾರಣವಾಗಿರುವುದನ್ನು ಅದು ಚಿತ್ರಿಸುತ್ತದೆ.

**೪.೪. ಪಾತ್ರ ಚಿತ್ರಣ**

ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಅನೇಕ ಪಾತ್ರಗಳನ್ನು ಕಾಣಬಹುದು. ಚಿಕ್ಕಮಕ್ಕಳಿಂದ ಹಿಡಿದು ಮುದುಕರವರೆಗೆ ಹಲವು ವಯೋಮಾನದ ಪಾತ್ರಗಳಿವೆ. ದುಷ್ಟರಿದ್ದಾರೆ. ಆದರ್ಶವಾದಿಗಳಿದ್ದಾರೆ. ಮಹಿಳೆಯರಿದ್ದಾರೆ, ಪುರುಷರಿದ್ದಾರೆ. ಬೇರೆಬೇರೆ ಧರ್ಮದ ಮತ್ತು ಜಾತಿಯ ಜನರು ಇದ್ದಾರೆ. ನಗರದವರು ಮತ್ತು ಹಳ್ಳಿಗಾಡಿನವರು ಇದ್ದಾರೆ. ಮಹಾ ಸಂಪ್ರದಾಯವಾದಿಗಳಿದ್ದಾರೆ; ಕ್ರಾಂತಿಕಾರಿಗಳಿದ್ದಾರೆ. ಇವೆಲ್ಲವೂ ಜೀವಂತವಾದ ಪಾತ್ರಗಳು. ಒಂದು ನೂರು ವರ್ಷಗಳ ಮೂರು ತಲೆಮಾರುಗಳ ಕಥನವಿದಾಗಿರುವ ಕಾರಣ, ಇಲ್ಲಿ ನೂರಾರು ಪಾತ್ರಗಳು ಸಹಜವಾಗಿಯೇ ಇವೆ. ಇದೊಂದು ಹಲವು ಸ್ತರದ ಪಾತ್ರಗಳ ಪ್ರಯೋಗಶಾಲೆಯಂತಿದೆ. ಈ ಪಾತ್ರಗಳನ್ನು ಕಾದಂಬರಿಕಾರರು, ಅವುಗಳೇ ಆಡುವ ಮಾತುಗಳಿಂದ ಕಟೆಯುತ್ತಾರೆ; ತಮ್ಮ ನಿರೂಪಣೆಯಿಂದ ವಿವರಣೆ ವಿಶ್ಲೇಷಣೆಗಳಿಂದ ಕಟೆಯುತ್ತಾರೆ.

ಈ ಕಾದಂಬರಿಯಲ್ಲಿ ಬಹಳಷ್ಟು ಪಾತ್ರಗಳನ್ನು ಕಾಣಬಹುದು. ***ಕಮಲಯ್ಯ, ಸಾವಿತ್ರಿ, ವಾಸುದೇವಾಚಾರ್, ತುಳಸಮ್ಮ, ಅಂಬಕ್ಕ, ವೆಂಕಣ್ಣ, ಲಕ್ಷುಂಬಾಯಿ, ಬೋಧರಾಯ, ಸರಸ್ವತಿ, ಸೋನಕ್ಕ, ರಾಘು, ಲೀಲಾವತಿ, ಹಣಮ್ಯಾ, ಚಂಪಿ, ನಾರಾಯಣ, ಮೈನಾವತಿ, ರಾಮು***– ಹೀಗೆ ಹಲವಾರು ಪಾತ್ರಗಳನ್ನ ಕಾಣಬಹುದು.

ಇವುಗಳಲ್ಲಿ ಕೃತಿಯ ಪ್ರಧಾನವಾದ ಪಾತ್ರವೆಂದರೆ, ವಾಸುದೇವಾಚಾರ್ ಅವರ ಪಾತ್ರ, ಈ ಪಾತ್ರವು ಕಾದಂಬರಿಯ ಉದ್ದಕ್ಕೂ ಕಂಡು ಬರುತ್ತದೆ. ಈ ಕಾದಂಬರಿಯ ಕೇಂದ್ರ ಬಿಂದು ಎಂದೇ ಎಂದರೂ ತಪ್ಪಲ್ಲ. ಇವುಗಳಲ್ಲಿ ಕೆಲವು ಪಾತ್ರಗಳನ್ನು ಪರಿಶೀಲಿಸುವ ಮೂಲಕ, ಅವುಗಳನ್ನು ಕಟೆದ ಶ್ರೀನಿವಾಸ ವೈದ್ಯರ ಪ್ರತಿಭೆಯನ್ನೂ ಜೀವನದೃಷ್ಟಿಕೋನವನ್ನೂ ನೋಡಲು ಯತ್ನಿಸಬಹುದು.

**ಅ. ಪುರುಷ ಪಾತ್ರಗಳು**

ಈತ ಒಬ್ಬ ಬ್ರಾಹ್ಮಣನಾಗಿದ್ದು, ಉತ್ತರದ ಕಾನ್ಪುರದ ನಾನಾಸಾಹೇಬನ ಸೈನಿಕನಾಗಿದ್ದು, ದಕ್ಷಿಣದ ನರಗುಂದದ ದೊರೆಗೆ ಒಂದು ಸಂದೇಶವನ್ನು ತಂದವನು. ಹಾಗೆ ತಂದು ನವಲಗುಂದದಲ್ಲಿ ಮಳೆಗೆ ಸಿಕ್ಕು, ಬಂಧಿಯಾಗಿ, ಅಲ್ಲಿಯೇ ಉಳಿಯುತ್ತಾನೆ. ನಂತರ ಅಲ್ಲಿನ ಸ್ಥಳೀಯ ಬ್ರಾಹ್ಮಣರ ಹುಡುಗಿಯಾದ ಸಾವಿತ್ರಿಯನ್ನು ಲಗ್ನವಾಗಿ ಒಂದು ದೊಡ್ಡ ಕುಟುಂಬದ ಮೂಲಕರ್ತನಾಗುತ್ತಾನೆ. ಕುತೂಹಲಕರವೆಂದರೆ, ಉತ್ತರದ ಕಮಲಯ್ಯನು ಸಾವಿತ್ರಿಯ ಪ್ರಭಾವದಿಂದ ಕಮಲಾಚಾರ್ ಆಗಿ ಪರಿವರ್ತನೆಯಾಗುವುದು. ಇದನ್ನು ಕಾದಂಬರಿ ಬಹಳ ಸ್ವಾರಸ್ಯಕರವಾಗಿ ಚಿತ್ರಿಸುತ್ತದೆ.

ಸಾವಿತ್ರಿಯು ಸ್ಥಳೀಯ ಬ್ರಾಹ್ಮಣರ ಒಂದೊಂದೇ ಸಂಪ್ರದಾಯ ಮತ್ತು ಆಚರಣೆಗಳನ್ನು ಒಂದಾದ ಮೇಲೆ ಒಂದರಂತೆ ತಿಳಿಸಿಕೊಡುತ್ತ ಕಮಲಯ್ಯನನ್ನು ಒಬ್ಬ ದೇಶೀಯ ವ್ಯಕ್ತಿಯಾಗಿ ಪರಿವರ್ತಿಸುತ್ತಾಳೆ.

ಕಮಲಯ್ಯನು ತನ್ನ ದೇಶೀ ವೈದ್ಯ ಪದ್ಧತಿಯಿಂದ ಸಂಸ್ಥಾನದ ಮುಖ್ಯಸ್ಥರಾದ ಅಪ್ಪಾಸಾಹೇಬರ ಮನಸ್ಸನ್ನು ಗೆಲ್ಲುತ್ತಾನೆ. ಅವರು ಇವನಿಗೆ ಊರ ಹೊರಗಿನ ಅಗ್ರಹಾರದ ಒಂದು ಪುಟ್ಟ ಮನೆಯನ್ನು ವಾಸಕ್ಕೆ ಕೊಟ್ಟು ನಂತರ ಹಬ್ಬ ಹುಣ್ಣಿಮೆಗೆ ಚಿಟ್ಟಿ ಜೋಳ, ಪೆಂಟೆಬೆಲ್ಲ, ಕಾಳುಕಟ್ಟೆ ಇವೆ ಮುಂತಾದ ಪದಾರ್ಥಗಳನ್ನ ಕಳುಹಿಸಿಕೊಡುತ್ತಾರೆ.

ಹೀಗೆ ಎಲ್ಲಿಂದಲ್ಲೋ ಬಂದ ಕಮಲಯ್ಯನ ಚಿಕ್ಕದಾದ ಸಂಸಾರವನ್ನು ಕಟ್ಟಿಕೊಂಡು ತನ್ನ ಜೀವನವನ್ನು ಆರಂಭಿಸುತ್ತಾನೆ. ಆತನು ತನ್ನ ಸಜ್ಜನಿಕೆಯಿಂದ ಊರಿನ ಜನರ ಪ್ರೀತಿ ವಿಶ್ವಾಸಕ್ಕೆ ಪಾತ್ರನಾಗುವುದನ್ನ ಈ ಕಾದಂಬರಿ ಚಿತ್ರಿಸುತ್ತದೆ.

ಈ ಕಾದಂಬರಿಯ ಕೇಂದ್ರಬಿಂದು ವಾಸುದೇವಾಚಾರ್. ಇವರು ಕಮಲಾಚಾರ್ ಅವರ ಹಿರಿಯಮಗ, ಇವರು ಕುಟುಂಬದ ಹಿರಿಯ ಮಗನಾಗಿ ಉಳಿದ ಅಣ್ಣತಮ್ಮಂದಿರಿಗೆಲ್ಲಾ ಆದರ್ಶವ್ಯಕ್ತಿಯಾಗಿ ತನ್ನ ಜೀವನವನ್ನ ಸುಸೂತ್ರವಾಗಿ ಸಾಗಿಸಿಕೊಂಡು ಬರುತ್ತಾರೆ. ಇವರು ವೃತ್ತಿಯಲ್ಲಿ ವೈದ್ಯರಾಗಿದ್ದು ಜನರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗುತ್ತಾರೆ. ವಾಸುದೇವಾಚಾರ್ ಕುಟುಂಬ ದಿನದಿಂದ ದಿನಕ್ಕೆ ಆರ್ಥಿಕ ಸಮಸ್ಯೆ ಹೆಚ್ಚಾಗುವ ಕಾಲದಲ್ಲಿ ಅದರ ನಾಯಕತ್ವವನ್ನು ವಹಿಸಿದವರು.

ದೊಡ್ಡ ಕುಟುಂಬವನ್ನು ಸಂಭಾಳಿಸುವ ಹೊಣೆಗಾರಿಕೆ ಅವರ ಹೆಗಲಮೇಲೆ ಬೀಳುತ್ತದೆ. ಆರ್ಥಿಕ ಸಮಸ್ಯೆಯಿಂದ ತಮ್ಮ ಜಮೀನನ್ನು ಮೊರಬದ ರೈತ ಮಹದೇವಪ್ಪನಿಗೆ ವಾರಕ್ಕೆ ಕೊಡುತ್ತಾರೆ. ಅವನು ಇವರ ಆರ್ಥಿಕ ಸಂಕಷ್ಟಗಳನ್ನು ತಿಳಿದು ಬ್ಲಾಕ್ ಮೇಲ್ ಮಾಡುತ್ತಾನೆ. ಅದರಿಂದ ವಾಸುದೇವಾಚಾರ್ ಉಪಾಯವಾಗಿ ಪಾರಾಗುತ್ತಾರೆ.

ಮನೆಯಲ್ಲಿ ವಿಧವೆಯಾಗಿ ಇರುವ ಸೋದರಿ ಅಂಬಕ್ಕಳ ಕಿರಿಕಿರಿ, ಮಗ ಬೋಧನ ಉಪಟಳ, ಸೋದರ ವೆಂಕಣ್ಣನ ಹೊರಗಿನ ಲೈಂಗಿಕ ಸಂಬಂಧಗಳು, ಮನೆಯ ಸದಸ್ಯಳಾಗಿ ಬೆಳೆದ ರುಕುಮಾಯಿಯ ಏಕಾಂಗಿತನ ಇವೆಲ್ಲ ಅವರನ್ನು ಹಣ್ಣು ಮಾಡುತ್ತವೆ. ತನ್ನ ಮಕ್ಕಳು ಧಾರವಾಡಕ್ಕೆ ಹೋಗಿ ವಿದ್ಯಾಭ್ಯಾಸ ಪಡೆದ ಬಳಿಕ, ಅವರು ಹಿಡಿಯುವ ಬೇರೆಬೇರೆ ದಾರಿಗಳು ಕೂಡ ಅವನನ್ನು ಕಂಗೆಡಿಸುತ್ತವೆ. ಮಗಳನ್ನು ವರದಕ್ಷಿಣೆಯ ಲೋಭದಿಂದ ಗಂಡನ ಕಡೆಯವರು ಕೊಂದಾಗ ಅದರ ನೋವನ್ನು ಅವರು ಉಣ್ಣುತ್ತಾರೆ.

ಊರ ವೈದ್ಯರಾದ ವಾಸಣ್ಣನ ಬಳಿಕ ನಾನಾ ನಮೂನೆಯ ಜನ ಬಂದು ತಮ್ಮ ಕಷ್ಟವನ್ನು ಹೇಳಿಕೊಳ್ಳುತ್ತಾರೆ. ಮನೆತನದಿಂದ ಬಂದ ದೇಶೀ ವೈದ್ಯ ಪದ್ಧತಿಯ ಮೂಲಕ ವಾಸುದೇವಾಚಾರ್‌ಬಂದವರ ನೋವನ್ನು ನಿವಾರಿಸಲು ಯತ್ನಿಸುತ್ತಾನೆ. ಪ್ಲೇಗ್ ಕಾಯಿಲೆಯಿಂದ ಊರಿಗೆ ಊರು ಪರಿತಪಿಸುತ್ತಿರುವಾಗ ವಾಸುದೇವಾಚಾರ್ ಅವರ ವೈದ್ಯ ಪದ್ಧತಿ ಕೂಡ ಸೋಲುವಂತಾಗುತ್ತದೆ. ಕಡೆಗೆ ನಂಬಿಕೆಯ ಮೇಲೆ ಜನರಿಗೆ ತೀರ್ಥಕೊಡುವುದರ ಅವರ ಮನಸ್ಸಿಗೆ ವಿಶ್ವಾಸ ಕೊಡುವ ಕೆಲಸ ವಾಸುದೇವಾಚಾರ್‌ಮಾಡುತ್ತಾರೆ. ಜೀವನದ ತುಂಬ ಅನಿರೀಕ್ಷಿತವಾದ ವಿಪತ್ತನ್ನು ಎದುರಿಸಿ, ಅವನ್ನೆಲ್ಲ ಸಹಿಸಿ ಮಾಗುವ ಒಂದು ಪರಿಪಕ್ವ ವ್ಯಕ್ತಿತ್ವವನ್ನು ವೈದ್ಯ ಅವರು ವಾಸಣ್ಣನಲ್ಲಿ ಕಟೆಯುತ್ತಾರೆ. ಈ ಕಾದಂಬರಿಯು ನಾಯಕ ಪ್ರಧಾನ ಕಾದಂಬರಿಯಲ್ಲವಾದರೂ, ವಾಸಣ್ಣನು ಕಾದಂಬರಿಯ ನಾಯಕನ ಹಾಗೆ

ಬೆಳೆದಿರುವುದನ್ನು ಅರಿಯಬಹುದು. ಆದರೆ ಆತ ಇಷ್ಟು ಬೆಳೆದರೂ ತನ್ನ ಸಂಪ್ರದಾಯವಾದದಿಂದ ಬಂದ ಮೌಢ್ಯಗಳನ್ನು ಬಿಟ್ಟುಕೊಡುವುದಿಲ್ಲ. ಊರಿಗೆ ಹೊರಟಾಗ ಒಬ ಬ್ರಾಹ್ಮಣ ವಿಧವೆ ಬರಿಕೊಡ ಹಿಡಿದು ನೀರು ತರಲೆಂದು ಹೊರಟವಳು ವಾಸುದೇವಾಚಾರ್ ಎದುರೇ ಬಂದಾಗ, ಆಚಾರ್ಯರು ಖಿನ್ನರಾಗಿ ***"ಮೊದಲೇ ತಲಿ ಬೋಳಿಸಿಕೊಂಡಾಕೆ, ಮ್ಯಾಲ ಬರಿಕೊಡ ಬ್ಯಾರೇ ಇಕೀನೂ ಈ ಬರಬೇಕಾಗಿತ್ತಾ..... ಮಾರುತಿರಾಯ"*** ಎಂದು ಚಿಂತಿಸುತ್ತಾರೆ. ಹೀಗೆ ದೊಡ್ಡತನವನ್ನು ಪಡೆದ ವ್ಯಕ್ತಿಯಲ್ಲಿ ಈ ಬಗೆಯ ಸಂಕುಚಿತ ನಂಬಿಕೆಗಳೂ ಇರುವುದನ್ನು ಕಾದಂಬರಿ ಚಿತ್ರಿಸುತ್ತದೆ.

ಈ ಕಾದಂಬರಿಯಲ್ಲಿ ನಾರಾಯಣನ ಪಾತ್ರ ಬಹಳ ವಿಶಿಷ್ಟವಾಗಿ ಬಂದಿದೆ. ಈತನು ಬ್ರಾಹ್ಮಣ ಮಹಿಳೆಗೆ ಶೂದ್ರ ತಂದೆಯಿಂದ ಹುಟ್ಟಿದವನು ಎಂದು ಕಾದಂಬರಿ ಸೂಚ್ಯವಾಗಿ ಹೇಳುತ್ತದೆ. ಇವನು ಬ್ರಾಹ್ಮಣ ಸಂಪ್ರದಾಯ ಮತ್ತು ಆಚರಣೆಗಳ ಆಚೆ ಬೆಳೆಯುವವನು. ರಣಹಲಗೆ ಬಡಿಯುವುದು, ರೈತರಜೊತೆ ಹೆಚ್ಚು ಕಾಲ ಕಳೆಯುವುದು, ಸಂಕವ್ವನ ಬಾವಿಯೊಳಗೆ ಈಸುವುದು, ತಿಪ್ಪಯ್ಯನ ಮಠದ ಪಟ ಏರಿಸುವುದು-ಇತ್ಯಾದಿ ಬ್ರಾಹ್ಮಣ ಹುಡುಗರು ಮಾಡಲಾಗದ ಸಾಹಸಗಳನ್ನು ಮಾಡುತ್ತಿರುವನು. ಧೀರ ಮತ್ತು ಶಕ್ತಿವಂತನಾದ ನಾರಾಯಣನಿಗೆ ಮನುಷ್ಯರ ನೋವಿಗೆ ಮಿಡಿಯುವ ವಿಚಿತ್ರ ಗುಣವೂ ಇದೆ. ತಂಗಿಯಾದ ಸೋನಿಯ ಸಾವಿನ ಬಗ್ಗೆ ಸಂಶಯ ಬಂದಾಗ ಅವಳ ಕೊಲೆಗೆ ಕಾರಣವಾದ ಅವಳ ಅತ್ತೆ ಮತ್ತು ಗಂಡನನ್ನು ಹಿಡಿದು ಶಿಕ್ಷಿಸುತ್ತಾನೆ.

ಈತ ಜಾತಿ ಪದ್ಧತಿಯನ್ನು ನಂಬದ ಮನೋಧರ್ಮವುಳ್ಳವನು. ಇವನನ್ನು ಅಬ್ರಾಹ್ಮಣನೆಂದು ತಿಳಿದ ಬಳಿಕ ವಾಸಣ್ಣನ ಕುಟುಂಬ ಪಕ್ಷಪಾತದಿಂದ ನಡೆಸಿಕೊಳ್ಳುತ್ತದೆ. ಅವನು ಮನೆಯಿಂದ ಹೊರನಡೆಯುತ್ತಾನೆ. ತಮ್ಮ ನಿರಂಕುಶಮತಿಯಿಂದ ಹೊಸ ಜೀವನ ಆರಂಭಿಸುತ್ತಾನೆ. ಒಬ್ಬ ನಾಟಕ ಕಂಪನಿಯ ಹೆಣ್ಣಾದ ಮೈನಾಳನ್ನು ಪ್ರೇಮಿಸಿ ಲಗ್ನವಾಗುತ್ತಾನೆ. ಎಲ್ಲ ಜಾತಿ ಸಂಪ್ರದಾಯಗಳಿಂದ ಆಚೆ ನಿಂತು ಎಲ್ಲರಿಗಿಂತಲೂ ಎತ್ತರಕ್ಕೆ ಬೆಳೆಯುತ್ತಾನೆ. ಇದನ್ನು ಕಾದಂಬರಿ ಮನಮುಟ್ಟುವಂತೆ ಚಿತ್ರಿಸುತ್ತದೆ. ಈ ನಾರಾಯಣ ಬೆಳೆದ ಎತ್ತರಕ್ಕೆ ಬೆಳೆಯಲಾರದ ಸಂಪ್ರದಾಯವಾದಿಯಾದ ವಾಸುದೇವಾಚಾರ್‌ಅವನ ಮುಂದೆ ಕುಬ್ಜನಾಗುವುದನ್ನ ಕಾದಂಬರಿ ಶೋಚನೀಯವಾಗಿ ಚಿತ್ರಿಸುತ್ತದೆ. ಹೀಗೆ ಈ ಕಾದಂಬರಿಯಲ್ಲಿ ನಾರಾಯಣನ ಪಾತ್ರ ಅತ್ಯಂತ ಮಹತ್ವಾಗಿ ಮೂಡಿಬಂದಿರುವುದನ್ನು

ಕಾಣಬಹುದಾಗಿದೆ. ಈ ಪಾತ್ರವನ್ನು ಕಟೆಯುವಲ್ಲಿ ಕಾದಂಬರಿಯ ಬಹಳ ಶ್ರದ್ಧೆಯನ್ನು ವಹಿಸುತ್ತದೆ. ಈ ಮೂಲಕ ಅವನ ಜೀವನದೃಷ್ಟಿಕೋನಕ್ಕೆ ಅದು ಮನ್ನಣೆಯನ್ನು ಕೂಡ ಕೊಡುತ್ತದೆ. ಜಾತಿ ಮಡಿ ಮೈಲಿಗೆ ಇವನ್ನು ಆಚರಿಸುವಂತಹ ಅವನನ್ನು ನಿರಾಕರಿಸಿದವರ ಜನ ಸಂಕುಚಿತತೆಯನ್ನು ಈ ಮೂಲಕ ಅದು ಬಹಿರಂಗಗೊಳಿಸುತ್ತದೆ. ಇದು ಕಾದಂಬರಿ ಕಟ್ಟಿಕೊಡುವ ಜೀವನ ಆದರ್ಶವನ್ನು ಸೂಚಿಸುವ ಪಾತ್ರವಾಗಿ ಬಂದಿದೆ.

'ಹಳ್ಳಬಂತು ಹಳ್ಳ' ಕೇವಲ ತನ್ನ ಸಮೃದ್ಧವೂ ವಿಶಿಷ್ಟವೂ ಆದ ಜೀವನ ವಿವರಗಳಿಂದ ಮುಖ್ಯವಾಗಿಲ್ಲ. ತನ್ನ ಕಲೆಗಾರಿಕೆಯಿಂದ ಮಾತ್ರ ಮುಖ್ಯವಾಗಿಲ್ಲ. ಜತೆಗೆ ಈ ಬಗೆಯ ಆದರ್ಶವಾದಿ ಪಾತ್ರಗಳನ್ನು ಶ್ರದ್ಧೆಯಿಂದಲೂ ಪ್ರೀತಿಯಿಂದಲೂ ರೂಪಿಸುವ ಮೂಲಕ ಕೂಡ ಮುಖ್ಯವಾದ ಕಾದಂಬರಿಯಾಗಿದೆ.

ಈತ ವಾಸುದೇವಾಚಾರ್ ಅವರ ಹಿರಿಯ ಮಗ. ಈತ ಚಿಕ್ಕಂದಿನಲ್ಲೇ ಸ್ವೇಚ್ಛೆಯಾಗಿ ಬೆಳೆಯುವನು. ಇವನಿಗೆ ಕರದಂಟಿನ ಮೋಹವು ಬಹಳ ಇತ್ತು. ಇವನೊಬ್ಬ ರಸಿಕ ಯುವಕನಂತೆ ಕಾದಂಬರಿ ಚಿತ್ರಿಸುತ್ತದೆ. ಬೋಧರಾಯನನ್ನು ಚಿತ್ರಿಸುವಾಗ ಮಾತ್ರ ಕಾದಂಬರಿಯು ತನ್ನ ವಿನೋದ ಶೈಲಿಯನ್ನು ಹೊರಗೆ ತೆಗೆದು ಬಳಸುತ್ತದೆ. ಬೋಧನು ನವ ಹರೆಯದ ಯುವಕನಾಗಿ ಹತ್ತಿಗಂಟುಗಳನ್ನು ಹೊತ್ತುಕೊಂಡು ಬರುವ ಕೂಲಿ ಹೆಣ್ಣಾಳುಗಳ ಸೊಂಟ ನೋಡುತ್ತಾ ತನ್ನ ಪ್ರಣಯ ಚೇಷ್ಟೆಯಲ್ಲಿ ಬೀದಿಯಲ್ಲಿ ಆರಂಭಿಸುತ್ತಾನೆ. ತಹಶೀಸಿಲ್ದಾರ್ ನೋಂದಣಿ ಕಛೇರಿಯಲ್ಲಿ ಹೆಂಗಸರ ಹೆಬ್ಬೆಟ್ಟನ್ನ ಮುಟ್ಟಿ ಕಾಗದದಲ್ಲಿ ರುಜು ಮಾಡಿಸುವ ಒಂದು ರೀತಿಯ ಸ್ಪರ್ಶಸುಖವನ್ನು ಅನುಭವಿಸುತ್ತಾನೆ.

ಇವನಿಗೆ ಶಿರಕೋಳದ ಕುಲಕರ್ಣಿ ಮಾಸ್ತರ ಮಗಳು ಸರಸ್ವತಿಯನ್ನ ಕೊಟ್ಟು ವಿವಾಹ ಮಾಡಿಸಲಾಗುತ್ತದೆ. ಆದರೆ ಅವನೊಬ್ಬ ಕೀಳರಿಮೆಯಿಂದ ನರಳುವ ತನ್ನ ಮಡದಿಯ ಮೇಲೆ ತನ್ನ ಪ್ರತಾಪವನ್ನು ತೋರುವ, ಕಠಿಣವಾದ ಮಾತಿನಿಂದ ಅವಳ ಮನಸ್ಸನ್ನು ನೋಯಿಸುವ, ಒಬ್ಬ ಬೇಜವಾಬ್ದಾರಿ ಗಂಡನಾಗಿ ಬೆಳೆಯುತ್ತಾನೆ. ಒಂದೇ ಕುಟುಂಬದಲ್ಲಿ ರಾಮುವಿನಂತಹ ಒಬ್ಬ ಆದರ್ಶವಾದಿ ಸ್ವಾತಂತ್ರ್ಯ ಹೋರಾಟಗಾರನು ಹುಟ್ಟಿದಂತೆ, ಬೋಧನಂತಹ ಒಬ್ಬ ತುಚ್ಛಮನುಷ್ಯ ಕೂಡ ಹುಟ್ಟಿಬೆಳೆಯುತ್ತಾನೆ. ಇವನನ್ನು ಚಿತ್ರಿಸುವ ಶೈಲಿಯಲ್ಲಿಯೇ ಕಾದಂಬರಿಯು ಇವನೊಬ್ಬ ಅನುಕರಿಸಬಾರದ ಪಾತ್ರವಾಗಿರುವಂತೆ ನೋಡಿಕೊಂಡಿದೆ. ಆದರೆ

ಬದುಕಿನ ವಿಚಿತ್ರ ಸ್ವಭಾವಕ್ಕೆ ಇಂತಹ ಪಾತ್ರಗಳನ್ನು ಒಂದುನಿದರ್ಶನವೆಂಬಂತೆ ಕೂಡ ಕಾದಂಬರಿ ಭಾವಿಸಿದೆ.

**ಆ. ಮಹಿಳಾ ಪಾತ್ರಗಳು**

ಈಕೆ ವಾಸುದೇವಾಚಾರ್ ಅವರ ಪತ್ನಿ. ಇವಳನ್ನು ಕಾದಂಬರಿ ಒಬ್ಬ ಆದರ್ಶ ತಾಯಿಯಂತೆಯೂ ಮಡದಿಯಂತೆಯೂ ಚಿತ್ರಿಸುತ್ತದೆ. ಗಂಡನ ಮತ್ತು ಮನೆಯ ಎಲ್ಲ ಸುಖ ದುಃಖಗಳಲ್ಲಿ ಭಾಗಿಯಾಗುವ ಈಕೆ, ತನ್ನ ತಾಯ್ತನ, ಸಹನಶೀಲತೆ ಮತ್ತು ವಿವೇಕಗಳಿಂದ ಒಬ್ಬ ಧೀಮಂತ ಮಹಿಳೆಯಾಗಿ ಕಾಣುತ್ತಾಳೆ. ವಾಸುದೇವಾಚಾರ್ ಮತ್ತು ತುಳಸಮ್ಮ ಇವರಿಬ್ಬರ ಕುಟುಂಬದ ಸಂಪೂರ್ಣ ಹೊರೆಯನ್ನು ಹೊತ್ತಿಕೊಂಡು ಸಾವು ಸಾಲ ಮುಂತಾದ ಕಷ್ಟಗಳಿಂದ ತೊಳಲಾಡುವ ಕುಟುಂಬವನ್ನು ಅದು ಪತನವಾಗದಂತೆ ಸಂಭಾಳಿಸುತ್ತಾರೆ.

ತುಳಸಕ್ಕ ಮೃದು ಸ್ವಭಾವದವಳಾಗಿದ್ದು ಮನೆಯೊಳಗೆ ಇದ್ದಾಳೋ ಇಲ್ಲವೋ ಎನ್ನುವ ಹಾಗೆ ಇರುವವಳು. ಇವಳು ತನ್ನ ಮಕ್ಕಳಿರಬಹುದು ಅಥವಾ ಮೈದುನ, ನಾದಿನಿಯರಿಗಿರಬಹುದು ಅವರಿಗೆ ತೀರ ಕೆಳದನಿಯಲ್ಲಿ ಜಾಣ್ಮೆಯಿಂದ ಹಿತವಚನ ನೀಡುತ್ತಾ ಸರಿಯಾದ ದಾರಿಯಲ್ಲಿ ನಡೆಸುವವಳು. ಎಂತಹ ಕಷ್ಟದ ಪರಿಸ್ಥಿತಿಗಳು ಎದುರಾದರೂ ಅವನ್ನು ಎದುರಿಸುವ ಕೆಚ್ಚೆದೆ, ತಾಳ್ಮೆ, ಸಹನೆ ಮುಂತಾದ ಗುಣಗಳನ್ನ ಮೈಗೂಡಿಸಿಕೊಂಡ ಈಕೆ, ಒಬ್ಬ ವಿವೇಕಿಯಾದ ಮಹಿಳೆಯಾಗಿದ್ದಾಳೆ.

ಮಗಳಾದ ಸೋನಿಯ ಮದುವೆಯನ್ನು ತನ್ನ ಮೈಮೇಲಿದ್ದ ಬಂಗಾರವನ್ನ ಒತ್ತೆಯಿಟ್ಟು ಮಾಡುತ್ತಾಳೆ. ಲಗ್ನವಾದ ಮೂರೇ ದಿನದ ನಂತರ ಮಗಳ ಸಾವಿನ ಸುದ್ದಿ ಕೇಳಿ ಆಕೆ ಕುಸಿದುಬೀಳುತ್ತಾಳೆ. ಕಡೆಯತನಕ ತನ್ನ ಗಂಡನ ಜತೆಗೆ ನಿಂತು, ಅವನ ಸಮಸಮಕ್ಕೆ ಬದುಕನ್ನು ಎದುರಿಸುತ್ತಾಳೆ. ಇಂತಹ ದಿಟ್ಟ ಮಹಿಳೆಯನ್ನು ಚಿತ್ರಿಸುವಲ್ಲಿ ಕಾದಂಬರಿಯು ಬಹಳ ಕಾಳಜಿಯನ್ನುವಹಿಸಿದೆ ಎನ್ನಬಹುದು.

ಇದೇ ರೀತಿ ಅಂಬವ್ವ ಸಾವಿತ್ರಿ ಮತ್ತು ರುಕುಮಾಯಿ ಬರುತ್ತಾರೆ. ಇವರೆಲ್ಲರೂ ದೊಡ್ಡ ಹೋರಾಟ ಮಾಡುವವರು. ರುಕುಮಾಯಿಯು ಯಾವುದೋ ಮರಾಠ ಜಾತಿಯವಳು. ಅನಾಥಳಾಗಿ ವಾಸುದೇವಾಚಾರ್ಯರ ಮನೆಯನ್ನು ಸೇರಿಕೊಂಡವಳು. ಅವಳದೊಂದು ಘೋರಬದುಕು. ಅವಳಿಗೆ ಲಗ್ನವಾಗುವುದಿಲ್ಲ. ಅವಳು ತನ್ನ ದೇಹದ ಕಾಮನೆಗಳನ್ನು ಸ್ವಯಂ ನಿಯಂತ್ರಣ ಮಾಡಿಕೊಂಡು

ಬದುಕಲು ಯತ್ನಿಸುತ್ತಾಳೆ. ಅದನ್ನು ಕಾದಂಬರಿ ಹೀಗೆ ನಿರೂಪಿಸುತ್ತದೆ; ***"ಅ ಮನಿ ಹೆಣ್ಣು ಮಕ್ಕಳು ಸೊಸೆಂದರ ಸಂಗ್ತೀನ ರುಕುಮ ತಾನೂ ದೊಡ್ಡಾಕಿ ಆದಳು. ಬೆಳೆದಳು. ಅವರ ಶೋಭನ ಪ್ರಸ್ತ ಬಾಣಂತನಗಳಿಗೆ ಸಾಕ್ಷಿಯಾಗಿ ನಿಂತಳು. ತುಂಂಬಿದ ಸಂಸಾರದಾಗ ಏಕಾಕಿಯಾಗಿ ಒಣಗಿ ಕೋತನ ಬೆಳೆದಳು".*** ಬೆಳೆಯೋದು ನಿಜ. ಆದರೆ ಒಣಗಿಕೊಂಡು ಬೆಳೆಯುವುದು ಘೋರವಾದ ಸತ್ಯ. ಇಂತಹ ಸತ್ಯವನ್ನು ಹೇಳುವುದಕ್ಕೆ ಕಾದಂಬರಿ ಹಿಂಜರಿಯುವುದಿಲ್ಲ. ಒಂದು ಬಗೆಯಲ್ಲಿ ವೈದ್ಯರ 'ಹಳ್ಳಬಂತು ಹಳ್ಳ' ಮಹಿಳೆಯರ ಆತ್ಮಕಥನ ಎನ್ನಬಹುದು.

ಸಾವಿತ್ರಿಯು ಊರಿಗೆ ಪರಕೀಯನಾಗಿರುವ ವ್ಯಕ್ತಿಯನ್ನು ಗಂಡನನ್ನಾಗಿ ಮಾಡಿಕೊಂಡು, ಅವನನ್ನು ಸ್ಥಳೀಕನನ್ನಾಗಿ ಪರಿವರ್ತಿಸುವಲ್ಲಿ ಮಾಡುವ ಹೋರಾಟವು ಯಾವುದೇ ಸ್ವಾತಂತ್ರ್ಯ ಹೋರಾಟಕ್ಕಿಂತ ಕಡಿಮೆಯಿಲ್ಲದಂತಿದೆ. ಅವಳು ಒಂದು ಕಡೆ ಪೂಜೆಗೆ ಹೋದಾಗ, ಅಲ್ಲಿನ ಹೆಂಗಸರು ಅವಳ ಗಂಡನ ಹೆಸರನ್ನು ಹೇಳಲು ಒತ್ತಾಯಿಸುತ್ತಾರೆ. ಆಗ ಆಕೆ ***"ಸಮಸ್ತ ಜಗದೋದ್ಧಾರಕ್ಕೆ ಹುಟ್ಟಿ ಬಂದವರು ಉಡುಪಿಯ ಮಧ್ವಾಚಾರ್ಯರು: ಮುನವಳ್ಳಿ ಯಂಕಣ್ಣಾಚಾರ ಮಗಳು ಸಾವಿತ್ರಿಬಾಯಿಯ ಉದ್ಧಾರಕ್ಕೆ ಹುಟ್ಟಿಬಂದವರು ನವಲುಗುಂದದ ಕಮಲಚಾರ್ಯರು"*** ಎಂದು ಒಗಟಾಗಿ ಆಕೆಯ ಗಂಡನನ್ನು ಮಧ್ವಾಚಾರ್ಯರಿಗೆ ಸಮೀಕರಿಸಿ, ತನ್ನ ವಿರೋಧಿಗಳ ಬಾಯಿಯನ್ನು ಮುಚ್ಚಿಸಲು ಯತ್ನಿಸುತ್ತಾಳೆ.

ಅಂಬವ್ವ ಒಂದು ಬಗೆಯಲ್ಲಿ ಕಾದಂಬರಿಯ ನಾಯಕಿ ಎಂದರೂ ನಡೆಯುತ್ತದೆ. ಚಿಕ್ಕವಯಸ್ಸಿನಲ್ಲಿ ವಿಧವೆಯಾದ ಆಕೆ ನಮ್ಮ ಸಮಾಜದ ಸಂಪ್ರದಾಯವಾದದ ಬಲಿಪಶು. ಅನಾಥಳಾಗಿ ತವರುಮನೆ ಸೇರಿಕೊಳ್ಳುವ ಆಕೆ, ತನ್ನ ಇಡೀ ಬಾಳನ್ನು ಆ ಮನೆಯ ಎಲ್ಲ ಕಿರಿಯ ತಲೆಮಾರಿನ ಮಕ್ಕಳನ್ನು ಪೋಷಿಸುವ ಕೆಲಸವನ್ನು ಆರಂಭಿಸುತ್ತಾಳೆ. ತನ್ನ ಬಾಳಿನ ಬರಡನ್ನು ಈ ಮಕ್ಕಳ ಬಾಳನ್ನು ರೂಪಿಸುವ ಮೂಲಕ ಕಂಡುಕೊಳ್ಳುತ್ತಾಳೆ. ಕಾದಂಬರಿಯ ಮಹತ್ವವೆಂದರೆ, ಆಕೆಯನ್ನು ಕೇವಲ ತಾಯಿತನದ ಮಹಿಳೆಯಾಗಿ ಮಾತ್ರ ಚಿತ್ರಿಸಿಲ್ಲ. ಆಕೆಯು ಇನ್ನೂ ಜಾತಿಯ ಸಂಕುಚಿತತೆ ಬಿಟ್ಟುಕೊಡದ ಮಹಿಳೆಯನ್ನಾಗಿಯೂ ಚಿತ್ರಿಸಿದೆ. ಹೀಗೆ ಪರಸ್ಪರ ವಿರುದ್ದ ಎನಿಸುವ ಗುಣಗಳುಳ್ಳ ಸಂಕೀರ್ಣವಾದ ಪಾತ್ರವನ್ನಾಗಿ ವೈದ್ಯರು ಆಕೆಯನ್ನು ಚಿತ್ರಿಸಿರುವರು.

## ಅಧ್ಯಾಯ-೫. ಧಾರ್ಮಿಕ-ದಾರ್ಶನಿಕ ವಿಶ್ಲೇಷಣೆ

೫.೧ – ಧರ್ಮ

೫.೨ – ಆಚರಣಾ ಲೋಕ

೫.೩ – ದಾರ್ಶನಿಕತೆ

## ಅಧ್ಯಾಯ ೫

## ಕಾದಂಬರಿಯ ಧಾರ್ಮಿಕ ಮತ್ತು ದಾರ್ಶನಿಕ ವಿಶ್ಲೇಷಣೆ

'ಹಳ್ಳಬಂತು ಹಳ್ಳ' ಕಾದಂಬರಿಯು ಮೂಲತಃ ಒಂದು ದಾರ್ಶನಿಕ ಕಾದಂಬರಿಯಾಗಿದೆ. ಇದು ಚರಿತ್ರೆಯ ಸಂಗತಿಯನ್ನು ಒಳಗೊಂಡಿರುವುದರಿಂದ ಚಾರಿತ್ರಿಕ ಕಾದಂಬರಿಯಾಗಿದೆ; ಒಂದು ಸಾಮಾಜಿಕ ಕಥೆಯನ್ನು ಒಳಗೊಂಡಿರುವುದರಿಂದ ಸಾಮಾಜಿಕ ಕಾದಂಬರಿಯಾಗಿದೆ ನಿಜ. ಆದರೆ ಆಳದಲ್ಲಿ ಇದು ಒಳಗೊಂಡಿರುವ ದಾರ್ಶನಿಕ ಆಯಾಮದ ಕಾರಣದಿಂದ, ಇದೊಂದು ದಾರ್ಶನಿಕ ಕಾದಂಬರಿಯೂ ಆಗಿದೆ. ಇದಕ್ಕೆ ಕಾರಣ, ಕಾದಂಬರಿಕಾರನ ಜೀವನ ಕುರಿತ ದಾರ್ಶನಿಕವಾದ ದೃಷ್ಟಿಕೋನವು ಈ ಕಾದಂಬರಿಯ ಹಿಂದೆ ಕೆಲಸ ಮಾಡಿರುವುದು. ಈ ಜೀವನ ದೃಷ್ಟಿಕೋನವು ಮಾನವತಾವಾದಿಯಾಗಿದೆ. ಅದು ಮಾಗಿದೆ. ಅದು ಎಲ್ಲ ಬಗೆಯ ತಾರತಮ್ಯಗಳನ್ನು ಒಪ್ಪದ ಸಮದರ್ಶಿಯಾಗಿದೆ. ಈ ದಾರ್ಶನಿಕ ಆಯಾಮವನ್ನು ಈ ಕಾದಂಬರಿ ಒಳಗೊಂಡಿರುವ ಧಾರ್ಮಿಕ ಸಂಗತಿಗಳನ್ನು ಆಚರಣೆಯ ಲೋಕವನ್ನು ಗಮನಿಸುವ ಮೂಲಕ ನೋಡಬಹುದು.



### ೫.೧. ಧರ್ಮ

ಧರ್ಮವು ಭಾರತದ ಕಲೆಗಳಲ್ಲಿ ಒಂದಲ್ಲಾ ಒಂದು ಬಗೆಯಲ್ಲಿ ಸೇರಿಕೊಂಡಿದೆ. ನಾವು ಒಂದಲ್ಲಾ ಒಂದು ಧರ್ಮಕ್ಕೆ ಸೇರಿದವರಾಗಿದ್ದೇವೆ. ಹೀಗಿರುವುದು ನಮ್ಮ ಸ್ವತಃ ಆಯ್ಕೆಯಲ್ಲ; ಅದು ಆಕಸ್ಮಿಕವಾಗಿದೆ. ನಿರ್ದಿಷ್ಟ ಮತ ಧರ್ಮದ ಕುಟುಂಬವೊಂದರಲ್ಲಿ ಹುಟ್ಟಿದ ಕಾರಣದಿಂದಲೇ ನಮಗೆ ಆ ಧರ್ಮದ ಆಚಾರ-ವಿಚಾರ ನಂಬಿಕೆಗಳ ಪರಂಪರೆಯೊಳಗೆ ಜೀವಿಸಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಅದರ ವಿರುದ್ಧ ಹೋರಾಡಿ ಧರ್ಮದಿಂದ ಹೊರಗೆ ಬಂದಾಗಲೂ ಅದು ಬೇರೆಬೇರೆ ಬಗೆಯಲ್ಲಿ ನಮಗೆ ಅಂಟಿಕೊಂಡೇ ಇರುತ್ತದೆ. ಮಹತ್ವದ ಸಂಗತಿಯೆಂದರೆ, ನಾವು ಯಾವುದಾದರೂ ಒಂದು ಧರ್ಮಕ್ಕೆ ಸೇರಿದವರಾಗಿ ಇರುವುದಲ್ಲ. ಆ ಧರ್ಮದೊಳಗಿದ್ದು ಅದರ ಬಗ್ಗೆ ವಿಮರ್ಶಾತ್ಮಕ ನಿಲುವನ್ನು ತಾಳುವುದು. ಅದರ ಕೇಡನ್ನು ಟೀಕಿಸುವುದು. ಅದರ ಒಳಿತನ್ನು ಮೆಚ್ಚುವುದು. ಅದರಿಂದ ಹುಟ್ಟುವ ಮನುಷ್ಯ ವಿರೋಧಿ ಚಿಂತನೆಗಳನ್ನು ನಿರಾಕರಿಸುವದು.

ಈ ಹಿನ್ನೆಲೆಯಲ್ಲಿ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಬರುವ ಜನ ಸಮುದಾಯಗಳು ಒಂದಲ್ಲಾ ಒಂದು ಧರ್ಮಕ್ಕೆ ಸೇರಿದವರಾಗಿರುವರು. ಹಲವಾರು ಜಾತಿಸಮುದಾಯಗಳ ಹಿಂದೂ ಧರ್ಮವು ಇಲ್ಲಿದೆ. ಇಸ್ಲಾಂ ಧರ್ಮಕ್ಕೆ ಸೇರಿದ ಮುಸ್ಲಿಂ

ಜನರು ಇಲ್ಲಿದ್ದಾರೆ. ಬಹಳ ಕಡಿಮೆ ಪ್ರಮಾಣದಲ್ಲಿ ಕ್ರೈಸ್ತಧರ್ಮದ ಜನರು ಇದ್ದಾರೆ. ಕಾದಂಬರಿಯ ಕಥೆ ಒಳಗೊಂಡಿರುವ ಬ್ರಾಹ್ಮಣ ಕುಟುಂಬವು ಮೂಲತಃ ಮಾಧ್ವ ಮತಕ್ಕೆ ಸೇರಿದ್ದು. ಹೀಗಾಗಿ ಸಹಜವಾಗಿ ಇಲ್ಲಿ ಮಾಧ್ವ ಸಂಪ್ರದಾಯದ ಆಚರಣೆಗಳು ನಂಬಿಕೆಗಳು ತುಂಬಾ ಇವೆ. ಅದರಲ್ಲೂ ವಾಸಣ್ಣನ ಕುಟುಂಬವು ಸಂಪ್ರದಾಯವಾದಿ ಹಿನ್ನೆಲೆಯ ಕುಟುಂಬವಾದ ಕಾರಣ, ಮತ್ತು ಇದರ ಸದಸ್ಯರು ಧಾರ್ಮಿಕ ಪ್ರವೃತ್ತಿಯವರಾದ ಕಾರಣ, ಇಲ್ಲಿ ಅನೇಕ ಆಚರಣೆಗಳ ವಿವರಣೆಗಳು ಬರುತ್ತವೆ.

ಕಮಲಯ್ಯನವರು ಧಾರವಾಡದ ಮಾರುತಿದೇವರ ಪೂಜೆ ಮಾಡುವುದು; ನಂತರ ಮಕ್ಕಳಿಲ್ಲದೆ ಪರಿತಪಸುತ್ತಿರುವಾಗ ತಮ್ಮ ಮನೆಯಲ್ಲಿಯೇ ದೊರೆತಂತಹ ಲಕ್ಷ್ಮೀನರಸಿಂಹನ ವಿಗ್ರಹಪೂಜೆ ಮಾಡುವುದು ಇತ್ಯಾದಿ ಪೂಜೆಯ ವಿವರಗಳಿವೆ. ಇಲ್ಲಿ ಧರ್ಮವು ಮನುಷ್ಯರನ್ನು ಸಾತ್ವಿಕವಾಗಿ ರೂಪಿಸುವುದನ್ನು ಕಾಣಬಹುದು. ಆದರೆ ಕಾದಂಬರಿಯಲ್ಲಿ ಇತರೆ ಸಮುದಾಯಗಳ ಧಾರ್ಮಿಕ ಆಚರಣೆಗಳ ವಿವರಣೆಗಳು ಅಷ್ಟಾಗಿ ಇಲ್ಲ. ಲಿಂಗಾಯತ ಸ್ವಾಮಿಯ ಪಾತ್ರವೊಂದು ಬಂದರೂ ಅವರ ಧಾರ್ಮಿಕ ಆಚರಣೆಗಳ ವಿವರಗಳು ಇಲ್ಲಿ ಇಲ್ಲ.

ಇಲ್ಲಿ ಕೂಡ ಆಳವಾದ ಧಾರ್ಮಿಕ ಶ್ರದ್ಧೆಯು ಮಠದ ಸ್ವಾಮಿಯವರನ್ನು ಹೆಚ್ಚು ಮಾನವೀಯ ವ್ಯಕ್ತಿಯನ್ನಾಗಿ ಮಾಡಿರುವುದನ್ನು ಕೂಡ ಕಾಣಬಹುದು. ಇದನ್ನು ಉತ್ತರಾದಿ ಮಠದಿಂದ ವಾಸುದೇವಾಚಾರ್ ಮನೆಗೆ ಬರುವ ಯತಿಗಳ ವಿಷಯದಲ್ಲಿಯೂ ನೋಡಬಹುದು. ಇಲ್ಲಿ ಬರುವ ಇಬ್ಬರೂ ಧಾರ್ಮಿಕ ನಾಯಕರು ಬಹಳ ಘನತೆಯುಳ್ಳ ವ್ಯಕ್ತಿಗಳಾಗಿ ಬಂದಿದ್ದಾರೆ. ಆದರೆ ಧರ್ಮವು ಕೆಲವರನ್ನು ದುಷ್ಟರನ್ನಾಗಿಯೂ ಮಾಡಿದೆ. ಇದಕ್ಕೆ ಸಾಕ್ಷಿ, ಉತ್ತರಾದಿ ಮಠದ ಸ್ವಾಮಿಯವರ ಜತೆಗೆ ಬಂದ ಕೆಲವು ಪರಿವಾರದವರು. ಅವರಲ್ಲಿ ಕೆಲವರು ಲಂಚಗುಳಿಕರೂ ಲಂಪಟರೂ ಕಾಮುಕರೂ ಇರುವುದನ್ನು ಕಾದಂಬರಿ ಚಿತ್ರಿಸುತ್ತದೆ. ಒಂದು ನಿರ್ದಿಷ್ಟ ಧರ್ಮವು ಮನುಷ್ಯರ ಸ್ವಭಾವಕ್ಕೆ ಕಾರಣವಲ್ಲ ಎಂಬುದು ಇದರ ಧ್ವನಿಯಾಗಿದೆ.

ಇದಕ್ಕೆ ಹೋಲಿಸಿದರೆ ಕಾದಂಬರಿಯಲ್ಲಿ ಮುಸ್ಲಿಂ ಸಮುದಾಯವು ದೊಡ್ಡ ಪ್ರಮಾಣದಲ್ಲಿ ಇಲ್ಲ. ಆದರೆ ಈ ಧರ್ಮದ ಸಂಸ್ಕೃತಿಯನ್ನು ಕಾದಂಬರಿಯು ಬಹಳ ಒಳಗೊಂಡಿಲ್ಲ. ಆದರೆ ಮುಸ್ಲಿಂ ಸಮುದಾಯಕ್ಕೆ ಸೇರಿದ ವ್ಯಕ್ತಿಗಳ ಚಿತ್ರಗಳನ್ನು ಅದು ಒಳಗೊಂಡಿದೆ. ಅವರು ಬಸ್‌ಚಾಲಕರಾಗಿ ಬರುತ್ತಾರೆ. ಸ್ವಾತಂತ್ರ್ಯ ಸಂಗ್ರಾಮದ ಹೋರಾಟಗಾರರಾಗಿ ಬರುತ್ತಾರೆ. ಹಿಂದೂ ಗುಡಿಗಳಲ್ಲಿ ವಾದ್ಯ ನುಡಿಸುವವರಾಗಿ ಬರುತ್ತಾರೆ. ಆದರೆ ಈ ಕಾದಂಬರಿಯಲ್ಲಿ ಹಿಂದೂ ಮತ್ತು ಮುಸ್ಲಿಂ ಸಮುದಾಯಗಳ ನಡುವೆ ಅಂತಹ

ಸಂಘರ್ಷಗಳು ಕಾಣುವುದಿಲ್ಲ. ಬದಲಾಗಿ ಒಂದು ಬಗೆಯ ಸಮನ್ವಯತೆ ಕಾಣುವುದು. ಈ ಸಮನ್ವಯತೆಯು ಒಳ್ಳೆಯಕೆಲಸಗಳಲ್ಲಿ ಮಾತ್ರವಲ್ಲ, ಕೆಟ್ಟಕೆಲಸಗಳಲ್ಲೂ ಇದೆ. ನೊಂದಣಿ ಕಛೇರಿಯಲ್ಲಿ ಒಬ್ಬ ಮುಸ್ಲಿಂಸಾಹೇಬರು ಮತ್ತು ಬೋಧರಾಯನು ಒಟ್ಟಾಗಿ ಕಾರ್ಯನಿರ್ವಹಿಸಿ ಜನರನ್ನ ವಂಚಿಸಿ ಬಂದಂತಹ ಹಣದಲ್ಲಿ ಇಬ್ಬರು ಸಮನಾಗಿ ಹಂಚಿಕೊಳ್ಳುವ ಚಿತ್ರವಿದೆ. ಹಿಂದು ಮತ್ತು ಮುಸ್ಲಿಂ ಧರ್ಮದವರು ಒಟ್ಟಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ಬ್ರಿಟಿಷರ ವಿರುದ್ಧ ಹೋರಾಡುವ ಚಿತ್ರಗಳಿವೆ. ಆದರೆ ಬ್ರಿಟಿಷರ ಅಧಿಕಾರದಿಂದ ಕೆಲವು ಜನರು ದರ್ಪವನ್ನು ತೋರುವುದನ್ನು ನೋಡಬಹುದು.

ಫೌಜುದಾರ ಇಸ್ಮಾಯಿಲ್‌ಖಾನ್ ಪಾತ್ರ ಇದಕ್ಕೆ ಸಾಕ್ಷಿ. ಇಸ್ಮಾಯಿಲ್ ಖಾನ್‌ಗೆ ಬ್ರಿಟಿಷ್ ಸರ್ಕಾರ ನೀಡಿದ ಹುದ್ದೆಯ ಅವನನ್ನ ಸಮಾಜದಲ್ಲಿ ದರ್ಪ, ಕ್ರೌರ್ಯ ಮುಂತಾದ ದುರ್ನಡತೆಗಳಿಂದ ನಡೆದುಕೊಳ್ಳುವಂತೆ ಮಾಡುತ್ತದೆ. ಅಂದರೆ ಮನುಷ್ಯರಲ್ಲಿರುವ ದುಷ್ಟತನಕ್ಕೆ ಅನೇಕ ಸಲ ಧರ್ಮವು ಕಾರಣವಾಗಿರದೆ, ಅವರ ರಾಜಕೀಯ ಅಧಿಕಾರವು ಕಾರಣವಾಗಿರುತ್ತದೆ ಎಂದು ಕಾದಂಬರಿ ಸೂಚಿಸುತ್ತದೆ. ಮುಖ್ಯ ಸಂಗತಿಯೆಂದರೆ ಹೀಗೆ ಅಧಿಕಾರದಿಂದ ಮೆರೆಯುವವರು, ಸಾತ್ವಿಕ ರೋಷವುಳ್ಳ ವಾಸುದೇವಾಚಾರ್ಯರಂತಹ ಸಾಮಾನ್ಯ ಮನುಷ್ಯರ ಪ್ರತಿಭಟನೆಯ ಮುಂದೆ ಮಣಿಯುವುದು. ಸೋಲುವುದು.

ಈ ಕಾದಂಬರಿಯಲ್ಲಿ ಮಾಧ್ವ ಸಂಪ್ರದಾಯವು ವಾಸಣ್ಣನ ಕುಟುಂಬದ ನಡವಳಿಕೆಯನ್ನ ನಿಯಂತ್ರಿಸುತ್ತದೆ. ಆದರೆ ಅದರ ಆರ್ಥಿಕ ಸಮಸ್ಯೆಗಳು ಸಾಮಾಜಿಕ ಕಷ್ಟಗಳು ಕುಟುಂಬದ ಸದಸ್ಯರನ್ನು ಮಾಧ್ವಮತದ ಆಚೆ ಹೋಗಿ ಕ್ರಿಯಾಶೀಲವಾಗಲು ನೂಕುತ್ತವೆ. ಆಧುನಿಕ ವಿದ್ಯಾಭ್ಯಾಸದಿಂದ ಬರುವ ಆಧುನಿಕತೆಯು ಕುಟುಂಬದ ಮೂರನೆಯ ತಲೆಮಾರಿನಲ್ಲಿ ಧಾರ್ಮಿಕ ನಂಬಿಕೆ ಕಟ್ಟುಪಾಡುಗಳನ್ನು ಕಡಿಮೆ ಮಾಡುತ್ತದೆ. ಅವರಲ್ಲಿ ಹೊಸಜೀವನ ದೃಷ್ಟಿಕೋನವನ್ನು ಹೊಸ ಚಿಂತನೆಯನ್ನು ಬೆಳೆಸುತ್ತದೆ. ಆದರೆ ಬದಲಾವಣೆಯಾಗದೆ ಉಳಿಯುವ ಅಂಬಕ್ಕನಂತಹ ಹಿರಿಯ ತಲೆಮಾರಿನಲ್ಲಿ ಅವರ ಮತದ ಶ್ರದ್ಧೆಯು ಜನರನ್ನು ಧಾರ್ಮಿಕ ಚೌಕಟ್ಟಿನೊಳಗೆ ಉಳಿಯುವಂತೆ ಮಾಡುತ್ತದೆ.

ಕೆಲವೊಮ್ಮೆ ಅದು ಅವರನ್ನು ಅಮಾನುಷವನ್ನಾಗಿಯೂ ಮಾಡುತ್ತದೆ. ಆದರೆ ಇದೇ ಧರ್ಮದ ಚೌಕಟ್ಟಿನಲ್ಲಿ ಬೆಳೆಯುವ ತುಳುಸಕ್ಕ ವಾಸುದೇವಾಚಾರ್‌ಮುಂತಾದವರು. ಇದರಿಂದ ತಮ್ಮ ಮನಸ್ಸನ್ನು ಸಂಕುಚಿತಗೊಳಿಸಿಕೊಳ್ಳದೆ ಉಳಿಯುತ್ತಾರೆ. ವಾಸುದೇವಾಚಾರು ತಮ್ಮ ಜನಪದ ವೈದ್ಯದಿಂದ ಊರಿನ ಎಲ್ಲ ಜಾತಿಯ ಸಮುದಾಯದ ವ್ಯಕ್ತಿಗಳಿಗೆ ಸೇವೆ ಮಾಡುತ್ತಾರೆ. ಇದೇ ಮಾಧ್ವಮತದ ಕುಟುಂಬದಲ್ಲಿ ಬೆಳೆದರೂ ನಾರಾಯಣನಂತಹ

ತರುಣರು ರಾಮುವಿನಂತಹ ಯುವಕರು ಸ್ವತಂತ್ರ ಮನೋವೃತ್ತಿಯಲ್ಲಿ ಜೀವಿಸುತ್ತಾರೆ. ಕಾದಂಬರಿಯು ಒಂದೇ ಧರ್ಮದ ಸದಸ್ಯರ ನಡುವೆ ನಡೆದ ವಿವಾಹ ಸಂಬಂಧಗಳು ಕೆಲವೊಮ್ಮೆ ವಿಫಲವಾಗುವುದನ್ನು ಚಿತ್ರಿಸುತ್ತದೆ. ಆದರೆ ಕೆಲವೊಂದು ಅಂತರ್ಜಾತಿ ಮತ್ತು ಅಂತರ್ ಧರ್ಮದ ವಿವಾಹದ ಚಿತ್ರಣಗಳಲ್ಲಿ ಸಂಬಂಧಗಳು ಮಾನವೀಯವಾಗಿರುವುದನ್ನು ಚಿತ್ರಿಸುತ್ತದೆ. ಯಾವುದೇ ಧರ್ಮವು ನಮ್ಮ ಸ್ವಭಾವವನ್ನು ನಿಯಂತ್ರಿಸುತ್ತದೆ, ಅದನ್ನು ಮೀರಿ ಹೋಗುವ ಪ್ರೇರಣೆಯನ್ನೂ ಕೊಡುತ್ತದೆ. ಈ ಎರಡೂ ಬಗೆಯ ಚಿತ್ರಗಳು ಈ ಕಾದಂಬರಿಯಲ್ಲಿವೆ.

ಧರ್ಮಗಳು ಹೆಚ್ಚೆಂದರೆ ಕೇವಲ ವೈಯಕ್ತಿಕ ಅನುಸರಣೆಗೆ ಸಂಬಂಧಪಟ್ಟವುಗಳೇ ಹೊರತು ಸಾರ್ವಜನಿಕವಾದ ಸಂಬಂಧಗಳನ್ನು ಅವು ಅಷ್ಟುಮುಖ್ಯವಲ್ಲ ಎಂಬುದು ಕಾದಂಬರಿಯ ನಿಲುವಾಗಿದೆ ಅನಿಸುತ್ತದೆ.

### ೫.೨. ಆಚರಣಾ ಲೋಕ

ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಹಲವಾರು ಸಮುದಾಯಗಳ ಜನರು ಬಂದರೂ, ಮುಖ್ಯವಾಗಿ ಮಾಧ್ವ ಬ್ರಾಹ್ಮಣ ಸಮುದಾಯದ ಜನರ ಜೀವನವು ಮುಖ್ಯವಾಗಿದೆ. ಹೀಗಾಗಿ ಈ ಸಮುದಾಯಕ್ಕೆ ಸಂಬಂಧಪಟ್ಟ ಧಾರ್ಮಿಕ ಮತ್ತು ಸಾಮಾಜಿಕ ಸಂಪ್ರದಾಯಗಳು ಮತ್ತು ಅವರ ಆಚರಣೆಗಳು ಇಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

ಹೀಗಾಗಿ ಕಾದಂಬರಿಯು ಒಂದು ಬಗೆಯಲ್ಲಿ ಸಾಂಸ್ಕೃತಿಕ ವಿವರಗಳಿಂದ ತುಂಬಿದೆ. ಕಾದಂಬರಿ ಆರಂಭವಾಗುವುದೇ ತಮಗೆ ಸಂತಾನ ಪಡೆಯಲು ಕಮಲಯ್ಯ ಮತ್ತು ಸಾವಿತ್ರಿ ದಂಪತಿಗಳು ಗುಡಿಯಲ್ಲಿ ಆಚರಣೆ ಮಾಡುವ ಮೂಲಕ. ಇವರ ಮೂಲಕ ಹುಟ್ಟುವ ಮಗನಾದ ವಾಸುದೇವಾಚಾರ್ ಅವರು ಸಂಪ್ರದಾಯವಾದಿ ಮನುಷ್ಯ ಆಗಿರುವುದರಿಂದ, ಧಾರ್ಮಿಕ ವಿಧಿ ವಿಧಾನಗಳನ್ನು ಪಾಲಿಸುವವರು. ಕಾದಂಬರಿಯಲ್ಲಿ ಅವರು ಸುದೀರ್ಘವಾಗಿ ಪೂಜೆ ಮಾಡುವ ಆಚರಣೆಗಳಿವೆ. ಅದರಲ್ಲೂ ವಾಸುದೇವಾಚಾರ್ ಅವರ ಸೋದರಿ ಅಂಬಕ್ಕನು ವಿಧವೆಯಾಗಿರುವ ಕಾರಣ, ಮಡಿಯ ಆಚರಣೆಗಳನ್ನು ಆಚರಿಸುವವಳು. ಅವಳು ಮಾಡುವ ಆಚರಣೆಗಳನ್ನು ಕಾದಂಬರಿಯು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ.

ಆದರೆ ಕೆಲವು ಜೀವನ ಸಮೃದ್ಧಿಯನ್ನು ಸೂಚಿಸುವ ಆಚರಣೆಗಳೂ ಇವೆ. ಅವೆಂದರೆ ಮದುವೆ ಸಂದರ್ಭದಲ್ಲಿ ನಡೆಯುವ ಆಚರಣೆಗಳು. ಮನೆಬಾಗಿಲಿಗೆ ಬಂದ ಹೆಣ್ಣು ಗಂಡುಗಳಿಗೆ ಆರತಿ ಬೆಳಗುವ, ಮಡಿಲಿಗೆ ಅಕ್ಕಿ ತುಂಬುವ ಆಚರಣೆಗಳು. ಮನೆಗೆ ವಾರಕ್ಕೆ

ಕೊಟ್ಟ ಹೊಲದ ಧಾನ್ಯ ಬಂದಾಗ ಅದನ್ನು ಬರಮಾಡಿಕೊಳ್ಳುವ ಸನ್ನಿವೇಶದಲ್ಲಿ ಧಾನ್ಯಲಕ್ಷ್ಮಿಯ ಸ್ತೋತ್ರ ಪಠಿಸುವ ಆಚರಣೆಗಳು. ಬಸುರಿಗೆ ಮಾಡುವ ಆಚರಣೆಗಳು, ಮನೆಯವರೆಲ್ಲರು ಮೈಕೈಗೆ ಅರಿಶಿನ ಬಳಿದುಕೊಂಡು ಸ್ನಾನಮಾಡಿ ಮಡಿಯಾಗುವ ವಿವರಗಳು, ಬೆಳೆ ಹೆಚ್ಚಾಗಿ ಬರಲಿ ಎಂದು ಲಕ್ಷ್ಮೀನರಸಿಂಹ ದೇವರ ಮೇಲೆ ಹರಕೆ ಕಟ್ಟುವುದು ಇತ್ಯಾದಿ.

ಒಟ್ಟಿನಲ್ಲಿ ಧಾರವಾಡ ಸೀಮೆಯ ಗ್ರಾಮೀಣ ಪ್ರದೇಶದ ಬ್ರಾಹ್ಮಣರ ಆಚರಣೆಗಳ ದೊಡ್ಡ ಲೋಕವೇ ಇಲ್ಲಿ ಅನಾವರಣಗೊಳ್ಳುತ್ತದೆ. ಅಂಬಕ್ಕಳ ಏಕಾದಶಿ, ದ್ವಾದಶಿ, ದಶಮಿ ಮುಂತಾದ ಆಚರಣೆಗಳಂತೂ ಕಾದಂಬರಿಯಲ್ಲಿ ಕಿಕ್ಕಿರಿದು ಬರುತ್ತವೆ.

ಬ್ರಾಹ್ಮಣರು ಜನಿವಾರ ಬದಲಿಸುವ ಒಂದು ಆಚರಣೆ ಬರುತ್ತದೆ. ತಲೆಬೋಳಿಸಿಕೊಂಡು ಮನೆಯ ಅಂಗಳದಲ್ಲಿ ಮನೆಯ ಗಂಡಸರೆಲ್ಲರೂ ಮಡಿಯಿಂದ ಮಣೆಯ ಮೇಲೆ ಕೂತು ***"ಯಜ್ಞೋ ಪವೀತಂ ಪರಮಂ ಪವಿತ್ರಂ..... ಯಜ್ಞೋಪವೀತಂ ಬಲಮಸ್ತು ತೇಜಂ"*** (ಪು.೧೬೯) ಎಂಬ ಶ್ಲೋಕವನ್ನು ಹೇಳುತ್ತಾ ಜನಿವಾರವನ್ನ ಬದಲಿಸುತ್ತಾರೆ.

ಬಹಳ ಅಪರೂಪಕ್ಕೆ ಬ್ರಾಹ್ಮಣರ ಸಾವಿಗೆ ಸಂಬಂಧ ಪಟ್ಟಂತೆ ಆಚರಣೆಗಳ ಚಿತ್ರಗಳೂ ಇವೆ. ವಾಸುದೇವಾಚಾರ್ ತಮ್ಮ ಅಪ್ಪನ ಹೆಸರಲ್ಲಿ ಎಳ್ಳುನೀರು ಬಿಡುವ ಅಚರಣೆಯಿದೆ. ಪ್ರತಿವರ್ಷ ಶ್ರಾದ್ಧದ ದಿವನ ನೈವೇದ್ಯ ಇಟ್ಟು ಪೂಜಿಸುವ ಆಚರಣೆಯಿದೆ. ಹೆಣ್ಣು ಮಕ್ಕಳಿಗೆ ಉಡಿ ತುಂಬುವಂತಹ ಆಚರಣೆಗಳಿವೆ. ಬಹಳ ವಿಶೇಷವೆಂದರೆ, ನಾರಾಯಣನು ಬೇರೆ ಜಾತಿಯ ಸ್ತ್ರೀ ಮೈನಾಳನ್ನು ವಿವಾಹವಾಗಿ ಬಂದಾಗ, ಆಕೆಗೆ ಅರಿಶಿನ, ಕುಂಕುಮ ಇಟ್ಟು ಉಡಿ ತುಂಬಿ ಕಳಿಸುವುದನ್ನು ಕಾಣಬಹುದು.

ಇವೆಲ್ಲವೂ ಕುಟುಂಬದ ಮಟ್ಟದಲ್ಲಿ ಮನೆಯೊಳಗೆ ನಡೆಯುವ ಆಚರಣೆಗಳು. ಆದರೆ ಕಾದಂಬರಿಯಲ್ಲಿ ಇಡೀ ಊರಿನ ಜನರು ಸೇರಿ ಆಚರಿಸುವ ಆಚರಣೆಗಳೂ ಇವೆ. ಕಾಮನ ಹಬ್ಬದ ಆಚರಣೆ ಇಂತಹದರಲ್ಲಿ ಒಂದು. ಊರಿನ ಹುಡುಗರು ರಣಹಲಿಗೆ ಬಡಿಯುವುದರ ಮೂಲಕ ಕಾಮನ ಹಬ್ಬಕ್ಕೆ ಚಾಲನೆ ನೀಡುತ್ತಾರೆ. ನಾರಾಯಣನು ಕೂಡ ಇದರಲ್ಲಿ ಸೇರಿಕೊಳ್ಳುತ್ತಾನೆ. ಅಲ್ಲಿ ನೆರೆದಿದ್ದ ಹುಡುಗರೆಲ್ಲರೂ ಪರಸ್ಪರ ಮೈಮೇಲೆ ಬಣ್ಣ ಎರಚುವುದರ ಮೂಲಕ ಹಬ್ಬ ಅಚರಿಸುತ್ತಾರೆ. ಕೊನೆಗೆ ಕಟ್ಟಿಗೆಯನ್ನ ಸುಡುವುದರ ಮೂಲಕ ಕಾಮನ ಹಬ್ಬ ಮುಗಿಯುತ್ತದೆ.

ಆದರೆ ಕಾದಂಬರಿಯಲ್ಲಿ ಆಚರಣೆಗಳು ಕೇವಲ ಧಾರ್ಮಿಕ ಜಗತ್ತನ್ನು ಅನಾವರಣ ಮಾಡುವುದಕ್ಕೆ ಬರುವುದಿಲ್ಲ. ಅವು ಸಂಸ್ಕೃತಿಯ ಚಿತ್ರವನ್ನು ಕೊಡಲು ಮಾತ್ರ ಬರುವುದಿಲ್ಲ. ಅವು ಇಲ್ಲಿನ ಮನುಷ್ಯರ ವಿಚಿತ್ರ ವರ್ತನೆಗಳ ಭಾಗವಾಗಿ ಕೂಡ ಬರುತ್ತವೆ. ಉದಾ.ಗೆ, ಅಂಬಕ್ಕನು ಪ್ರತಿನಿತ್ಯ ಮಡಿಯ ಆಚರಣೆಯಲ್ಲಿ ತೊಡಗುತ್ತ ತನಗೆ ಬೇಡವಾದವರನ್ನು ದೂರವಿಡಲು ನೋಯಿಸಲು ಅದನ್ನು ಬಯಸುತ್ತಾಳೆ.

ನಾರಾಯಣ ವೆಂಕಣ್ಣ ಅವರಂತಹ ಮುಕ್ತ ವರ್ತನೆಯ ವ್ಯಕ್ತಿಗಳಿಗೂ ಅಂಬಕ್ಕಳಂತಹ ಸಂಪ್ರದಾಯವಾದಿ ಮಹಿಳೆಗೂ ಇಲ್ಲಿ ಸಂಘರ್ಷ ನಡೆಯುತ್ತದೆ. ಸಂಪ್ರದಾಯ ಮತ್ತು ಆಚರಣೆಗಳನ್ನು ಮೀರುವ ಜನರನ್ನು ಕಂಡು ಹಿರಿಯ ತಲೆಮಾರಿನ ಅಂಬಕ್ಕ ಆಕ್ರೋಶ ಮಾಡುತ್ತಾಳೆ. ಸಂಪ್ರದಾಯವನ್ನು ಪಾಲಿಸುವುದು ಅವಳಿಗೆ ಜೀವನದ ಮಹತ್ವದ ಉದ್ದೇಶವಾಗಿರುತ್ತದೆ. ತನ್ನ ಕೈಗೆ ಗಾಯವಾದರೂ ಕಾಸಿದ ಕಾಂಚನಮುದ್ರೆಯನ್ನು ಕೈಗೆ ಹಾಕಿಸಿಕೊಳ್ಳುತ್ತಾಳೆ.

ಚಿಕ್ಕವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡು ಅವಳಿಗೆ ಜೀವನವು ಕಠೋರತೆಯನ್ನು ತೋರಿಸಿದೆ. ಇದರಿಂದ ಆದ ನೋವನ್ನು ಅವಳು ಕಠಿಣ ಸಂಪ್ರದಾಯ ಪಾಲನೆ ಮೂಲಕ ಮರೆಯಲು ಯತ್ನಿಸುತ್ತಾಳೆ. ಹಾಗೆ ಮರೆಯಲು ಕಷ್ಟವಾದಾಗ ಇತರರ ಮೇಲೆ ಅದನ್ನು ಚೆಲ್ಲುತ್ತಾಳೆ. ಆದ್ದರಿಂದ ಇಲ್ಲಿ ಸಂಪ್ರದಾಯ ಆಚರಣೆಗಳು ಧಾರ್ಮಿಕ ಬದುಕಿನ ಭಾಗವಾಗಿ ಮಾತ್ರ ಬರುವುದಿಲ್ಲ. ಅವು ಜೀವನ ಮತ್ತು ಲೋಕವು ಮಾಡಿದ ಅನ್ಯಾಯಕ್ಕೆ ಸೇಡು ತೀರಿಸಿಕೊಳ್ಳುವ ಭಾಗವಾಗಿ ಕೂಡ ಬರುತ್ತವೆ. ಅಂಬಕ್ಕ ತಲೆಬೋಳಿಸಿಕೊಳ್ಳುವುದು ಕಷ್ಟವಾದಾಗ, ತಹಸಿಲ್ದಾರ್ ಕಛೇರಿಗೆ ಹೋಗಿ ಪ್ರತಿಭಟನೆ ಮಾಡುವುದು ಇಂತಹ ಹತಾಶೆಯ ಸಂಕೇತವಾಗಿದೆ.

ವಾಸಾಚಾರ್ಯರ ಮನೆಯಿಂದ ಜಾತಿ ಕಾರಣಕ್ಕೆ ಹೊರಗೆ ಬರುವ ನಾರಾಯಣನು, ಕಾಮನಹಬ್ಬದಲ್ಲಿ ಶೂದ್ರ ಹುಡುಗರ ಜೊತೆ ಸೇರಿಕೊಂಡು ಜೋರಾಗಿ ರಣಹಲಿಗೆ ಬಡಿಯುವುದರ ಮೂಲಕ ತನ್ನ ಮೇಲೆ ಆಕ್ರಮಣ ಮಾಡಿದ ಸಂಪ್ರದಾಯವಾದದ ವಿರುದ್ಧ ತೀರಿಸಿಕೊಳ್ಳುತ್ತಾನೆ. ತನ್ನ ಮನಸ್ಸನ್ನು ಹಗುರಮಾಡಿಕೊಳ್ಳುತ್ತಾನೆ. ಹೀಗೆ ಆಚರಣೆಗಳ ಹಿಂದಿನ ನೋವು ಸೇಡು ನಂಬಿಕೆ ಕಷ್ಟಗಳನ್ನೆಲ್ಲ ಕಾದಂಬರಿ ಮಾನವೀಯವಾಗಿ ಚಿತ್ರಿಸುತ್ತದೆ.

೫.೩. **ದಾರ್ಶನಿಕತೆ**

ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ ' ಕಾದಂಬರಿ ಮೂಲತಃ ಒಂದು ದಾರ್ಶನಿಕ ಕೃತಿಯಾಗಿದೆ. ಕಾದಂಬರಿಯು ಹಲವಾರು ಘಟನೆಗಳಲ್ಲಿ ತನ್ನ ದಾರ್ಶನಿಕ ಅಂಶಗಳನ್ನು ಪ್ರಕಟಿಸುತ್ತದೆ. ಕುವೆಂಪು ಅವರ ಕಾದಂಬರಿಗಳಲ್ಲಿ ಬರುವಂತೆ ಇಲ್ಲಿಯೂ ಜೀವನವನ್ನು ಕಟ್ಟಿಕೊಡುವ ಕ್ರಮದಲ್ಲಿಯೇ ಒಂದು ಬಗೆಯ ಜೀವನದರ್ಶನಗಳನ್ನು ಹೊಮ್ಮಿಸುವ ವಿಧಾನವಿದೆ.

ಮನುಷ್ಯರ ವರ್ತನೆಯ ಅಥವಾ ಕೆಲಸದ ಹಿಂದೆ ಬೇರೆ ಬೇರೆ ಜೀವನ ತತ್ವಗಳು ಅಡಕವಾಗಿರುತ್ತವೆ. ಈ ಜೀವನ ತತ್ವಗಳು ಮನುಷ್ಯರ ಮಾತುಗಳಲ್ಲಿ ಪ್ರಕಟವಾಗುತ್ತವೆ. ಇಲ್ಲವೆ ಮಾಡುವ ಕೆಲಸದಲ್ಲಿ ಪ್ರಕಟಗೊಳ್ಳುವುದನ್ನ ಕಾಣಬಹುದು. ಇಂತಹ ಜೀವನ ತತ್ವಗಳನ್ನು ಹಿಡಿಯುವ ಎರಡು ಮಾರ್ಗಗಳಿವೆ.

ಒಂದು-ಯಾವುದಾದರೂ ಒಂದು ದಾರ್ಶನಿಕನ ಪಾತ್ರವನ್ನು ನಿರ್ಮಿಸಿಕೊಂಡು ಅದರ ಮೂಲಕ ದರ್ಶನವನ್ನು ಹೇಳುವುದು. ಎರಡು-ಮನುಷ್ಯರ ನಿತ್ಯ ಬಾಳಿನ ಜೀವನದ ಸಣ್ಣಮಟ್ಟ ವಿವರಗಳನ್ನು ಕೊಡುವ ಮೂಲಕ, ಅವುಗಳಲ್ಲಿ ಅಡಗಿರುವ ದರ್ಶನವನ್ನು ಕಾಣಿಸುವುದು.

ಈ ಕಾದಂಬರಿಯು ಎರಡನೇ ವಿಧಾನದಲ್ಲಿ ದರ್ಶನದ ನೋಟಗಳನ್ನು ಒಳಗೊಂಡಿದೆ. ಮೇಲುನೋಟಕ್ಕೆ ಸಣ್ಣಪುಟ್ಟ ಕ್ಷುದ್ರ ಎನಿಸುವ ಕೆಲಸಗಳನ್ನು ಬಹಳ ಶ್ರದ್ಧೆಯಲ್ಲಿ ಚಿತ್ರಿಸುವ ಮೂಲಕ ಅಂತಹ ಜೀವನ ದರ್ಶನದ ನೋಟಗಳನ್ನು ಇದು ಕೊಡುತ್ತದೆ. ಇದಕ್ಕೆ ನಿದರ್ಶನವೆಂದರೆ, ಮನೆಯ ಕೆಲಸಗಳಲ್ಲಿಯೇ ತಮ್ಮ ಜೀವನವನ್ನು ತೇಯುವ ರುಕುಮಾಯಿ ಮತ್ತು ಅಂಬವ್ವ, ಇವರಿಬ್ಬರಿಗೂ ಅಭದ್ರವಾದ ಬದುಕು. ಗಂಡನಿಲ್ಲ. ಮಕ್ಕಳಿಲ್ಲ. ಆದರೆ ಇವರು ಮನೆಯ ಎಲ್ಲ ಸೊಸೆಯಂದಿರ ಮತ್ತು ಹೆಣ್ಣುಮಕ್ಕಳ ಹೆರಿಗೆಯನ್ನು ಮಾಡಿಸಿ, ಅವರ ಕೂಸುಗಳನ್ನು ಬೆಳೆಸಿ ದೊಡ್ಡವರನ್ನಾಗಿ ಮಾಡುವಲ್ಲಿ ತಮ್ಮ ಜೀವನದ ಅರ್ಥವನ್ನು ಕಂಡುಕೊಳ್ಳುತ್ತಾರೆ. ಬಾಳಿನಲ್ಲಿ ಎದುರಾಗುವ ಸಮಸ್ಯೆಗಳನ್ನು ಲೆಕ್ಕಿಸದೆ ಅವನ್ನು ತಮ್ಮ ದುಡಿಮೆ ಪ್ರೀತಿ ಹೋರಾಟಗಳ ಮೂಲಕ ಮೆಟ್ಟಿ ನಿಲ್ಲುತ್ತಾರೆ. ಇದು ಕಾದಂಬರಿಯು ಬಿಟ್ಟುಕೊಡುತ್ತಿರುವ ಮಹತ್ವದ ಜೀವನ ದರ್ಶನವಾಗಿದೆ.

***"ವೈನಿ..... ನೀವೂ ವಾಸಣ್ಣಾ ಇರೋ ತನಕ ನನ್ನ ಮಕ್ಕಳು ಅನಾಥರಾಗತಾವ ಅಂತ ನಾ ತಿಳಿದಿಲ್ಲ. ಇನ್ನ ಒಂದು ವ್ಯಾಳ್ಯಾ ನಿಮಗ ಈ ನಾಲ್ಕು ಮಕ್ಕಳು ಬಾರ ಆಗತಿದ್ದರ ಹೇಳ್ರಿ..... ನಾಯಲ್ಲಾರನ್ನು ಕಟ್ಟಿಕೊಂಡು..... ಶಂಕವ್ವನ ಬಾವೀಯೊಳಗ ಆಶ್ರಯ ಪಡೀತೇನಿ"*** ಎಂದು ಒಬ್ಬ

ಮಹಿಳೆ ಇಲ್ಲಿ ಹೇಳುತ್ತಾಳೆ. ಈ ಮಾತುಗಳ ಹಿಂದೆ ಇರುವ ಜೀವನದ ನಂಬಿಕೆಯನ್ನು ಗಮನಿಸಬೇಕು. ನಮ್ಮ ಬಾಳನ್ನು ನಾವಷ್ಟೇ ಬಾಳುವುದಿಲ್ಲ. ಬೇರೆಯವರೂ ಬಾಳುತ್ತಾರೆ. ಇನ್ನೊಬ್ಬರ ಬಾಳಿಗಾಗಿ ನಾವು ಕೂಡ ಕಷ್ಟಪಡುತ್ತಿರುತ್ತೇವೆ. ಇದೆಲ್ಲವೂ ಒಂದು ಬಗೆಯ ನಂಬಿಕೆಯಿಂದ ನಡೆಯುತ್ತದೆ. ಈ ಮಹಿಳೆಗೆ ಮತ್ತೊಬ್ಬರು ತನ್ನ ಕಷ್ಟವನ್ನು ಕೇಳುವವರು ಇದ್ದಾರೆ ಎಂಬ ಗಾಢನಂಬಿಕೆಯಿದೆ. ಜೀವನದಲ್ಲಿ ದುರ್ಬಲರ ಅಸಹಾಯಕತೆಯು ಅನೇಕ ಸಲ ಸಾವಿನಲ್ಲಿ ಪರಿಹಾರ ಕಾಣಲು ಯತ್ನಿಸುತ್ತದೆ. ಆದರೆ ನಮ್ಮನ್ನು ಪ್ರೀತಿಸುವ ಜನರೂ ಇದ್ದಾರೆ ಎಂಬ ನಂಬಿಕೆ ಅವರನ್ನು ಬಾಳಲು ಪ್ರೇರಿಸುತ್ತದೆ. ಇಂತಹ ಸೋಲರಿಯದ ನಂಬಿಕೆಯೇ ಬಾಳಿನ ಗುಟ್ಟು ಎಂದು ಕಾದಂಬರಿ ಸೂಚಿಸುತ್ತದೆ.

ಇಲ್ಲಿನ ಪಾತ್ರಗಳು ತಮ್ಮ ಬಾಳಿನ ಕಷ್ಟವನ್ನು ಎದುರಿಸಲು ಮತ್ತೆಮತ್ತೆ ದೈವದ ಆಸರೆಗೆ ಹೋಗುತ್ತವೆ. ಇಲ್ಲಿನ ದೈವವು ಭಕ್ತಿಯನ್ನು ಮೆರೆಸಲು ಬರುವುದಿಲ್ಲ. ಬಾಳಿನ ನೋವನ್ನು ಹಂಚಿಕೊಳ್ಳುವ ಗೆಳೆಯನಂತೆ ಬರುತ್ತದೆ. ಆದ್ದರಿಂದ ಇಲ್ಲಿನ ಪಾತ್ರಗಳಿಗೆ ಧಾರ್ಮಿಕತೆಯನ್ನು ಅವರ ಬಾಳಿನ ಕಷ್ಟಗಳೇ ಅನಿವಾರ್ಯ ಮಾಡಿವೆ. ಇದಕ್ಕೆ ವಾಸುದೇವಾಚಾರ್ಯರು ಮಾಡುವ ದೇವರ ಪ್ರಾರ್ಥನೆಯೊಂದನ್ನು ಗಮನಿಸಬೇಕು:

***"ಮಾರುತಿ ರಾಯ ಅರವತ್ತು ವರುಷ ನನ್ನ ಮರ್ಯಾದಿ ಕಾಯ್ದಿಯಪ್ಪಾ ಮರ್ಯಾದೆಯಿಂದ ಕಣ್ಣ ಮುಚ್ಚಿಸಪ್ಪ ನಿನಗ ತಿಳಿದಂಗ ನಾ ಏನೂ ಅನ್ಯಾಯ ಮಾಡಿಲ್ಲ. ಯಾರಿಗೂ ಒಂದು ಬಿಲ್ಲೀ ಮೋಸಾ ಮಾಡಿಲ್ಲ. ನನ್ನ ಮಾರ್ಯದಿ ಕಾಯಪ್ಪ ಮಾರುತಿರಾಯ"***. ಇಲ್ಲಿ ಗಮನಾರ್ಹವಾದುದು, ನನಗೆ ಅನ್ಯಾಯ ಮಾಡಬೇಡ ಎನ್ನುವುದು ಮಾತ್ರವಲ್ಲ, ನಾನು ಯಾರಿಗೂ ಅನ್ಯಾಯ ಮಾಡದವನಾದ ಕಾರಣ, ನನಗೆ ಅನ್ಯಾಯ ಮಾಡಬೇಡ ಎನ್ನುವುದು. ನನಗೆ ಅನ್ಯಾಯ ಆಗುವುದಿಲ್ಲ ಎಂಬ ಭರವಸೆ ಇರುವುದು. ಈ ಬಗೆಯ ಭರವಸೆಯಿಲ್ಲದೆ ಬದುಕುವದು ಸಾಧ್ಯವೇ ಇಲ್ಲವೆಂಬಂತೆ ಇಲ್ಲಿನ ಜೀವನ ಕಠಿಣವಾಗಿದೆ.

ಜನರಲ್ಲಿ ಉಳಿದವರ ಬದುಕಿಗೆ ನೆರವಾಗುವ ಒಂದು ತುಡಿತವಿದೆ. ಇದಕ್ಕಾಗಿ ತಮ್ಮ ಜಾತಿಯನ್ನು ಗಮನಿಸುವುದಿಲ್ಲ. ಇಡೀ ಕಾದಂಬರಿಯಲ್ಲಿ ಲಿಂಗಾಯತರ ಮಠದ ಸ್ವಾಮಿಗಳು ಹಾಗೂ ವಾಸುದೇವಾಚಾರ್ಯರ ಸಂಬಂಧವು ಇಂತಹ ಅಪೂರ್ವ ಮಾನವೀಯ ಸಂಬಂಧವಾಗಿದೆ. ಸ್ವಾಮಿಗಳಿಗೆ ಕಾಯಿಲೆಯಾದಾಗ ವಾಸುದೇವಾಚಾರ್ಯರು ಅವರನ್ನು ಉಪಚರಿಸಲು ಮೂರು ತಿಂಗಳು ಊರನ್ನೇ ಬಿಟ್ಟು ಅವರಿದ್ದಲ್ಲಿ ಹೋಗಿ ನಿಲ್ಲುತ್ತಾರೆ. ಇದಕ್ಕಾಗಿ ಅವರ ಜಾತಿಯವರ ಟೀಕೆ ಬಂದರೂ ಲೆಕ್ಕಿಸುವುದಿಲ್ಲ. ಸ್ವಾಮಿಯವರೂ ಕೂಡ ವಾಸುದೇವಾಚಾರ್ಯರು ಅವರ ಜಾತಿಯವರಲ್ಲವಾದರೂ, ಅವರ ಎಲ್ಲ ಕಷ್ಟಸುಖಗಳಿಗೆ

ನೆರವಾಗುತ್ತಾರೆ. ಗ್ರಾಮೀಣ ಜೀವನದಲ್ಲಿ ಜಾತೀಯತೆ ಇದೆ. ಕ್ರೌರ್ಯವಿದೆ. ಆದರೆ ಇದರ ಜತೆಗೆ ಪರಸ್ಪರ ಕಷ್ಟಗಳಿಗೆ ಸಂದಿಸುವ ಮಾನವೀಯ ಮಿಡಿತವೂ ಇದೆ ಎಂಬುದನ್ನು ಕಾದಂಬರಿಯು ಬೇರೆಬೇರೆ ತರಹ ಕಾಣಿಸುತ್ತದೆ.

ಕಾದಂಬರಿಯಲ್ಲಿ ಜಾತಿಯ ಆಚೆ ವೈವಾಹಿಕ ಸಂಬಂಧಗಳು ಬೆಳೆಯುತ್ತವೆ. ಅವು ಯಶಸ್ಸನ್ನೂ ಪಡೆಯುತ್ತವೆ. ಮನೆಯಿಂದ ಹೊರಬಂದ ನಾರಾಯಣ ಬ್ರಾಹ್ಮಣ ಸಂಪ್ರದಾಯವನ್ನ ಮೀರಿ ಚಂದ್ರಭಾಗಾನ ಮಗಳು ಮೈನಾವತಿಯನ್ನು ವಿವಾಹವಾಗುತ್ತಾನೆ. ನಿಜವಾದ ಪ್ರೇಮಕ್ಕೆ ಜಾತಿ ಸಂಪ್ರದಾಯಗಳು ಅಡ್ಡ ಬರುವುದಿಲ್ಲ ಒಂದು ವೇಳೆ ಬಂದರು ಪ್ರೇಮಿಗಳು ಅವುಗಳನ್ನು ಲೆಕ್ಕಿಸದೆ ಹೋರಾಡಿ ಅವರುಗಳು ಬಯಸಿದ್ದನ್ನ ಪಡೆದೇ ತೀರುತ್ತಾರೆ ಎನ್ನುವುದನ್ನು ಕಾದಂಬರಿ ಸೂಚಿಸುತ್ತದೆ. ಕಾದಂಬರಿಯಲ್ಲಿ ಹೊಸ ತಲೆಮಾರಿನ ಅನೇಕರು ತಮ್ಮ ಆದರ್ಶಗಳನ್ನು ಸಾಧಿಸಲು ಹಿರಿಯರು ಹಾಕಿದ ಗೆರೆಯನ್ನು ದಾಟುತ್ತಾರೆ. ಹಾಗೆ ದಾಟಿ ದೊಡ್ಡದನ್ನು ಸಾಧಿಸುತ್ತಾರೆ ಕೂಡ.

ಮೈನಾಳನ್ನು ಕಟ್ಟಿಕೊಂಡು ಬಂದಿದ್ದ ನಾರಾಯಣನನ್ನ ಕಂಡು ಭಾವೋ ಸಾಹೇಬರು ಪಿತ್ತಕೆರಳಿ ***"ಲುಚ್ಚಾ..... ಲಫಂಗ..... ಪಾಜಿ ಬದ್ಮಾಶ್.....ಹಲ್ಕಟ..... ಫಾಜಲ್ ಲಬಾಡ....."*** ಎಂದು ಮರಾಠಿ ಶಬ್ದಗಳಿಂದ ನಾರಾಯಣನಿಗೆ ಬೈಯುವ ಪ್ರಸಂಗವು ಬರುತ್ತದೆ. ಇಲ್ಲಿನ ಹಿರಿಯರು ಚಿಕ್ಕವರು ಮಾಡಿದ ತಪ್ಪಿಗೆ ಕೆರಳುತ್ತಾರೆ. ಅವರನ್ನು ಶಿಕ್ಷಿಸುತ್ತಾರೆ. ಆದರೆ ಚಿಕ್ಕವರು ಎಳೆಯರು ಮಾಡಿದ ಕೆಲಸದಲ್ಲಿ ವಿವೇಕವಿದ್ದರೆ ಅವರನ್ನು ನಂತರ ಬೆಂಬಲಿಸುತ್ತಾರೆ. ಪ್ರೀತಿಸುತ್ತಾರೆ.

ರಾಮುವು ಕಾಲೇಜು ಬಿಟ್ಟು ಹೋರಾಟಕ್ಕೆ ಹೋಗುವುದು ವಾಸುದೇವಾಚಾರ್ಯರಿಗೆ ಅಪ್ರಿಯವಾಗಿರುತ್ತದೆ. ಆದರೆ ಮುಂದೆ ಅವರು ಅವನ ಹೋರಾಟದ ಹಿಂದೆ ಇರುವ ದೊಡ್ಡ ಉದ್ದೇಶವನ್ನು ಅರಿಯುತ್ತಾರೆ. ಅವನ ಮುಂದೆ ತಾವೇ ಚಿಕ್ಕವರಾಗುತ್ತಾರೆ. ಅವನ ಪ್ರಾಣ ಉಳಿಸಲು ಹೋರಾಟ ಮಾಡುತ್ತಾರೆ. ಅವನು ಕೊಲೆಯಾದಾಗ, ಮಕ್ಕಳಂತೆ ಅಳುತ್ತಾರೆ.

ನಾರಾಯಣನು ಜಾತಿಯ ಅಪಮಾನದ ಕಾರಣದಿಂದ ಮನೆಬಿಟ್ಟು ಹೋದಾಗ ಅವನನ್ನು ಮನೆಯಲ್ಲಿ ಉಳಿಸಿಕೊಳ್ಳಲು ಆಗದ್ದಕ್ಕೆ ಪರಿತಾಪ ಪಡುತ್ತಾರೆ. ಆದರೆ ಅವನು ತನ್ನ ಮನಸ್ಸಿನ ಕಹಿಯನ್ನು ಬಿಟ್ಟುಕೊಟ್ಟು ಅವರನ್ನು ಆದರಿಸುವ ಸನ್ನಿವೇಶ ಬಂದಾಗ, ಅವರು ಪರಿತಾಪದಿಂದ ಕುಬ್ಜರಾಗುತ್ತಾರೆ. ಹೀಗೆ ಹಿರಿಯರು ಕಿರಿಯರ ಸಾಹಸ ವಿವೇಕಗಳಿಂದ

ತಾವೂ ಬದಲಾಗುವುದನ್ನು ಕಾದಂಬರಿ ಚಿತ್ರಿಸುತ್ತದೆ. ಇದು ಕಾದಂಬರಿಯು ಬಿಟ್ಟುಕೊಡುವ ಬಹಳ ದೊಡ್ಡ ದಾರ್ಶನಿಕ ಸತ್ಯವಾಗಿದೆ.

ಹೀಗೆ ವೈದ್ಯರ 'ಹಳ್ಳ ಬಂತುಹಳ್ಳ' ಕಾದಂಬರಿಯು ಒಂದು ಶತಮಾನ ಕಾಲದ ಪ್ರಾದೇಶಿಕ ಜೀವನ ಕ್ರಮವನ್ನು ಮಾತ್ರ ಹೊಂದಿಲ್ಲ. ಆ ಜೀವನದ ಸಣ್ಣಪುಟ್ಟ ವಿವರಗಳನ್ನು ಕೂಡ ಶ್ರದ್ಧೆಯಿಂದ ನೀಡುತ್ತದೆ. ಈ ವಿವರಗಳಲ್ಲಿ ತುಂಬಿಕೊಂಡಿರುವ ಜೀವನ ಪ್ರೀತಿ, ಹೋರಾಟ ಮುಂತಾದ ತತ್ವಗಳನ್ನು ಕಾಣಿಸುತ್ತದೆ.

# ಅಧ್ಯಾಯ–೬. ಉಪಸಂಹಾರ

೬.೧– ಆಧ್ಯಯನದ ಫಲಿತಗಳು

೬.೨ – ಆಧ್ಯಯನದ ಸಾಧ್ಯತೆಗಳು

೬.೩– ಕೊನೆಯ ಮಾತು

# ಅಧ್ಯಾಯ ೬

# ಉಪಸಂಹಾರ

## ೬.೧. ಅಧ್ಯಯನದ ಫಲಿತಗಳು

ಆಧುನಿಕ ಕನ್ನಡ ಸಾಹಿತ್ಯದಲ್ಲಿಯೇ ವಿಪುಲವಾಗಿ ಬೆಳೆದ ಸಾಹಿತ್ಯ ಪ್ರಕಾರವೆಂದರೆ ಕಾದಂಬರಿ ಸಾಹಿತ್ಯ. ಕಾದಂಬರಿ ಸಾಹಿತ್ಯವು ಒಂದು ಪ್ರದೇಶದ ಜನರ ಜೀವನವನ್ನು ಅವರ ಭಾಷೆ, ಅಲ್ಲಿನ ಪರಿಸರವನ್ನು ಸಾಂಸ್ಕೃತಿಕವಾಗಿ ಕಟ್ಟಿಕೊಡುತ್ತದೆ. ಪ್ರಸ್ತುತ ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯು ಧಾರವಾಡ ಸೀಮೆಯ ಗ್ರಾಮೀಣ ಪ್ರದೇಶದ ಜೀವನ ಪರಿಸರವನ್ನು ವಾಸ್ತವವಾದಿ ನೆಲೆಯಲ್ಲಿ ಹಿಡಿದುಕೊಟ್ಟಿದೆ. ಇದರ ಅಧ್ಯಯನದಿಂದ ಹೊರಬಂದ ಫಲಿತಗಳನ್ನು ಹೀಗೆ ಗುರುತಿಸಬಹುದು.

೧. ಪ್ರಸ್ತುತ ಕಾದಂಬರಿಯಲ್ಲಿ ಮೂರು ತಲೆಮಾರುಗಳಿದ್ದು, ಮೂರನೇ ತಲೆಮಾರಿನ ರಾಮು ಎಂಬುವನು ಸಂಪ್ರದಾಯವಾದಿಂದ ಆಧುನಿಕತೆಯತ್ತ ಸಾಗುವನು ಈ ರೀತಿ ಸಾಂಪ್ರದಾಯಿಕತೆಯಿಂದ ಆಧುನಿಕತೆ ಕಡೆಗೆ ಜೀವನ ಸಾಗುವುದನ್ನ ಕಾದಂಬರಿ ಚಿತ್ರಿಸುತ್ತದೆ. ಮಾತ್ರವಲ್ಲ, ಸಂಪ್ರದಾಯವಾದದ ಮೇಲೆ ಆಧುನಿಕತೆಯು ಜಯ ಸಾಧಿಸುವುದನ್ನು ಚಿತ್ರಿಸುತ್ತದೆ. ಈ ಮೂಲಕ ಕಾದಂಬರಿ ಆಧುನಿಕತೆಯ ಪರವಾದ ನಿಲುವನ್ನು ತಳೆಯುತ್ತದೆ. ಕಾದಂಬರಿಯ ಕೊನೆಯಲ್ಲಿ ಹೊಸ ಸಮಾಜವನ್ನು ನಿರ್ಮಾಣ ಮಾಡುವ ಹೊಸತಲೆಮಾರೊಂದು ಉದಿಸಿಬರುತ್ತದೆ.

೨. ಕನ್ನಡದಲ್ಲಿ ಅಂತರ್‌ಜಾತಿ ವಿವಾಹದ ಪ್ರಸಂಗವುಳ್ಳ ಅನೇಕ ಕಾದಂಬರಿಗಳಿವೆ. ಅವುಗಳಲ್ಲಿ ಕೆಲವು ಕಾದಂಬರಿಗಳು ಸಂಪ್ರದಾಯ ಬದ್ಧತೆಯ ನೆಲೆಯವು. ಅಂತರ್ಜಾತಿ ವಿವಾಹಗಳು ಒಂದು ಬಗೆಯ ಕೆಡುಕೆಂಬ ಧೋರಣೆಯನ್ನು ಹೊಂದಿವೆ. ಇದಕ್ಕೆ ಭೈರಪ್ಪನವರ ಕಾದಂಬರಿಗಳು ಸಾಕ್ಷಿ. ಅವು ಈ ಮೂಲಕ ಜಾತಿವಾದವನ್ನು ಸೂಕ್ಷ್ಮವಾಗಿ ಪ್ರತಿಪಾದಿಸುತ್ತವೆ. ಆದರೆ 'ಹಳ್ಳಬಂತು ಹಳ್ಳ' ಕಾದಂಬರಿಯು ಜಾತಿಕಟ್ಟನ್ನು ಮೀರಿದ ಪ್ರೇಮವು ಶ್ರೇಷ್ಠವೆಂಬ ದನಿಯನ್ನು ಹೊಂದಿದೆ. ಅಂತಿಮವಾಗಿ ಮಾನವ ಸಂಬಂಧಗಳಲ್ಲಿ ನಮ್ಮ ಭಾವನೆಗಳು ಮುಖ್ಯವೇ ಹೊರತು, ಹುಟ್ಟಿನಿಂದ ಬಂದ ಜಾತಿಯಲ್ಲ ಎಂಬ ನಿಲುವನ್ನು ಹೊಂದಿದೆ. ಹೀಗಾಗಿ ಕಾದಂಬರಿಯಲ್ಲಿ ಅಂತರ್ಜಾತಿ ವಿವಾಹವಾದ ಜೋಡಿಗಳು ಸಮಾಜದಲ್ಲಿ ಉನ್ನತಮಟ್ಟದಲ್ಲಿ ಬದುಕುವುದರ ಚಿತ್ರಣಗಳು ಇವೆ. ಇದು ಕಾದಂಬರಿ

ನಮ್ಮ ಸಾಮಾಜಿಕ ಚಲನಶೀಲತೆಯ ಬಗ್ಗೆ ತಳೆದಿರುವ ಆರೋಗ್ಯ ಪೂರ್ಣ ಧೋರಣೆಯನ್ನು ಸೂಚಿಸುತ್ತದೆ.

೩. ಸಮಾಜದ ಕುಟುಂಬದಲ್ಲಿ ಗೌರವ ಮಾನ್ಯತೆ ಅಧಿಕಾರ ಇಲ್ಲದ ಪಾತ್ರಗಳು ಇಲ್ಲಿ ಬಹಳ ಬರುತ್ತವೆ. ಆವರೆಂದರೆ, ಬೇರೆಯಾವುದೊ ಕಾರಣಕ್ಕೆ ಕುಟುಂಬ ಕಳೆದುಕೊಂಡು ಅನಾಥರಾದ ಮಹಿಳೆಯರು, ಚಿಕ್ಕವಯಸ್ಸಿನಲ್ಲಿ ಗಂಡಕಳೆದುಕೊಂಡ ವಿಧವೆಯರು, ಕೆಳಜಾತಿಯವರು, ಸಮಾಜದಲ್ಲಿ ಆರ್ಥಿಕ ಬಲವಿಲ್ಲದ ಕಾರಣಕ್ಕಾಗಿ ಪ್ರತಿಷ್ಠೆ ಇಲ್ಲದವರು ಇತ್ಯಾದಿ. ಇವರು ತಮ್ಮ ಅಸ್ತಿತ್ವಕ್ಕಾಗಿ ದೊಡ್ಡ ಹೋರಾಟವನ್ನು ಮಾಡುತ್ತಾರೆ. ಕಾದಂಬರಿಯು ಇಂತಹವರ ಹೋರಾಟವನ್ನು ಬಹಳ ಮುಖ್ಯವೆಂದು ಹಿಡಿದುಕೊಡುತ್ತದೆ.

೪. ಈ ಕಾದಂಬರಿಯಲ್ಲಿ ಧೀಮಂತವಾದ ಮಹಿಳೆಯರ ಬಾಳಿನ ಚಿತ್ರಗಳಿವೆ. ಸಾಮಾಜಿಕವಾಗಿ ಅಧಿಕಾರವಿಲ್ಲದ ಮಹಿಳೆಯರು ಇಲ್ಲಿ ಪುರುಷರ ಯಜಮಾನಿಕೆಯಲ್ಲಿ ಬದುಕಬೇಕಾಗುತ್ತದೆ. ಆದರೆ ಈ ಅಧೀನ ಬಾಳುವೆಯನ್ನೇ ಅವರು ಸವಾಲಾಗಿ ಸ್ವೀಕರಿಸಿ, ದೊಡ್ಡ ಹೋರಾಟದ ಬಾಳನ್ನು ನಡೆಸುತ್ತಾರೆ. ತಮ್ಮ ದಿನನಿತ್ಯದ ಬಾಳಿನಲ್ಲಿ ಬದುಕನ್ನು ಎತ್ತಿಹಿಡಿಯಲು ದುಡಿಯುತ್ತಾರೆ. ದುಡಿಮೆಯು ಇಲ್ಲಿ ದೊಡ್ಡ ಮೌಲ್ಯವಾಗಿದೆ. ಕಾರಂತರ 'ಮರಳಿಮಣ್ಣಿಗೆ' ಮತ್ತು ಕುವೆಂಪು ಅವರ ಕಾದಂಬರಿಗಳನ್ನು ಬಿಟ್ಟರೆ, 'ಹಳ್ಳಬಂತು ಹಳ್ಳ' ಕಾದಂಬರಿಯೇ ದುಡಿಯುವ ಮಹಿಳೆಯರನ್ನು ಇಷ್ಟುದೊಡ್ಡ ಪ್ರಮಾಣದಲ್ಲಿ ಚಿತ್ರಿಸಿರುವುದು. ಮಹಿಳೆ ಇಲ್ಲಿ ಶೋಷಿತಳು ಹೌದು. ಆದರೆ ಅವಳ ಬಾಳು ಇಲ್ಲಿ ವಿಫಲವಲ್ಲ.

೫. ಸಾಮಾನ್ಯವಾಗಿ ಸಾಮಾಜಿಕವಾಗಿ ಮೇಲುಸ್ತರದ ಜನರ ಬದುಕನ್ನು ಹಿಡಿಯುವ ಕಾದಂಬರಿಗಳಲ್ಲಿ ಅವರನ್ನು ಶೋಷಿತರನ್ನಾಗಿ ನೋಡಿರುವ ಚಿತ್ರಗಳೇ ಹೆಚ್ಚು. ಆದರೆ ಈ ಕಾದಂಬರಿಯು ಬ್ರಾಹ್ಮಣರನ್ನು ಕುರಿತ ಸಾಮಾಜಿಕವಾಗಿ ಸಿದ್ಧ ಗ್ರಹಿಕೆಗಳನ್ನು ಹುಸಿಗೊಳಿಸುವಂತೆ, ಅವರ ಅಸಹಾಯಕತೆಯನ್ನು ಅಪಮಾನವನ್ನು ನೋವುಗಳನ್ನು ಚಿತ್ರಿಸುತ್ತದೆ. ಗ್ರಾಮೀಣ ಭಾಗದಲ್ಲಿ ಜಾತಿಯ ನಿರ್ಬಂಧಗಳಿದ್ದರೂ ಜನರು ಅನೇಕ ವಿಷಯದಲ್ಲಿ ಕೊಡುಕೊಳೆಯ ಬದಕುನ್ನು ಬದುಕುವುದನ್ನು ಇದು ಕಾಣಿಸುತ್ತದೆ.

೬. ಈ ಕಾದಂಬರಿಯ ಮಹತ್ವದ ಸಾಧನೆಯೆಂದರೆ, ಚಾರಿತ್ರಿಕವಾದ ವಸ್ತುವನ್ನು ತೆಗೆದುಕೊಂಡು, ಅದನ್ನು ಸಾಮಾಜಿಕ ಕಥನವನ್ನಾಗಿ ರೂಪಿಸುವುರು. ಚಾರಿತ್ರಿಕತೆಯ ಜತೆ ಸಾಮಾಜಿಕತೆಯನ್ನು ಬೆಸೆದಿರುವುದು. ಹೀಗಾಗಿ ಕುಟುಂಬವೊಂದರಲ್ಲಿ ಜೀವಗಳು ತಮ್ಮ ಬಿಡುಗಡೆಗೆ ಮಾಡುವ ಹೋರಾಟಗಳು ಮತ್ತು ರಾಜಕೀಯ ಹೋರಾಟಗಾರರು ದೇಶದ ಬಿಡುಗಡೆಗೆ ಮಾಡುವ ಹೋರಾಟಗಳು ಬೇರೆಬೇರೆಯಲ್ಲ ಎಂಬಂತೆ ಏಕೀಭವಿಸುತ್ತವೆ. ಸ್ವಾತಂತ್ರ್ಯ ಹೋರಾಟವನ್ನು ಹೀಗೆ ನಮ್ಮ ದೇಶದ ಕುಟುಂಬದ ಕಥೆಯೊಂದರ ಮೂಲಕ ನೋಡಿರುವ ಕಾದಂಬರಿಯು ಕನ್ನಡದಲ್ಲಿ ಕಡಿಮೆಯಿವೆ.

೭. ಪ್ರಸ್ತುತ ಕಾದಂಬರಿಯಲ್ಲಿ ವಸಾಹತುಶಾಹಿ ಆಳ್ವಿಕೆಯ ಅಪೂರ್ವ ಚಿತ್ರಗಳಿವೆ. ಕಾದಂಬರಿಯು ವಸಾಹತುಶಾಹಿ ಆಳ್ವಿಕೆಯ ಘೋರ ಪರಿಣಾಮಗಳನ್ನು ಹಿಡಿದುಕೊಡುತ್ತದೆ. ಅದೇ ರೀತಿಯಲ್ಲಿ ಈ ಆಳ್ವಿಕೆಯು ಭಾರತದ ಸಂಪ್ರದಾಯವಾದಿ ಸಮಾಜಕ್ಕೆ ಬೇಕಾದ ಔಷಧಿ ರೂಪದ ವೈಚಾರಿಕತೆಯನ್ನು ಆಧುನಿಕತೆಯನ್ನು ಕೂಡ ಕೊಡುತ್ತಿದೆ ಎಂಬುದನ್ನು ತೋರಿಸುತ್ತದೆ. ಹೀಗೆ ಒಂದೇ ಸಂಗತಿಯ ಎರಡು ಮುಖಗಳನ್ನು ಹಿಡಿದುಕೊಡಬಲ್ಲ ಚಾರಿತ್ರಿಕ ಪ್ರಜ್ಞೆಯನ್ನು ಈ ಕಾದಂಬರಿಯು ತೋರಿಸಿದೆ.

೮. ಈ ಕಾದಂಬರಿಯ ಅಧ್ಯಯನದಿಂದ ಉತ್ತರ ಕರ್ನಾಟಕದ ಭಾಷೆಯ ವಿವಿಧ ನೆಲೆಗಳನ್ನು ಅರಿಯಬಹುದು. ಉತ್ತರಕರ್ನಾಟಕದ ಅದರಲ್ಲೂ ಧಾರವಾಡ ಸೀಮೆಯ ಭಾಷೆಯನ್ನು ಈ ಕಾದಂಬರಿಯು ಅದ್ಭುತವಾಗಿ ಬಳಸಿಕೊಂಡಿದೆ. ಒಂದು ಪ್ರದೇಶದ ಭಾಷೆಯನ್ನು ಕಾದಂಬರಿ ಪ್ರಕಾರವು ಅದರಲ್ಲೂ ಮಹಾಕಾದಂಬರಿ ಪ್ರಕಾರವು ಸೂರೆಹೊಡೆದಂತೆ ಇತರೆ ಪ್ರಕಾರಗಳಿಗೆ ಸಾಧ್ಯವಿಲ್ಲ ಎಂಬುದು ಈ ಕೃತಿಯ ಅಧ್ಯಯನದಿಂದ ತೋರಿಬರುತ್ತದೆ. ಈ ಹಿನ್ನೆಲೆಯಲ್ಲಿ ಈ ಕಾದಂಬರಿಯು ರಾವ್ ಬಹದ್ದೂರರ ಗ್ರಾಮಾಯಣ ಮತ್ತು ಮಿರ್ಜಿ ಅಣ್ಣಾರಾಯರ ನಿಸರ್ಗವನ್ನು ನೆನಪಿಸುತ್ತದೆ.

## ೬.೨. ಹೆಚ್ಚಿನ ಅಧ್ಯಯನದ ಸಾಧ್ಯತೆಗಳು

ಆಧುನಿಕ ಕನ್ನಡ ಸೃಜನಶೀಲ ಸಾಹಿತ್ಯದಲ್ಲಿ ಜನಪ್ರಿಯವಾದ ಸಾಹಿತ್ಯ ಪ್ರಕಾರವೆಂದರೆ ಕಾದಂಬರಿ ಪ್ರಕಾರ. ಅದು ಕರ್ನಾಟಕದ ಬೇರೆಬೇರೆ ಜನಸಮುದಾಯಗಳ ಜೀವನ ಕ್ರಮವನ್ನು ತನ್ನ ಬಾಹುಗಳಲ್ಲಿ ಬಾಚಿ ಹಿಡಿದುಕೊಟ್ಟಿದೆ. ಕುವೆಂಪು ರಾವ್‌ಬಹದ್ದೂರ, ಮಿರ್ಜಿ ಅಣ್ಣಾರಾಯ, ಕುಂವೀ, ದೇವನೂರ ಮಹಾದೇವ, ಗೀತಾ ನಾಗಭೂಷಣ-ಹೀಗೆ ಅನೇಕ ಕಾದಂಬರಿಕಾರರು, ತಮ್ಮ ಕಾದಂಬರಿಯಲ್ಲಿ ಜೀವನದ ಅರ್ಥವನ್ನು ಶೋಧಿಸಿರುವರು. ಜತೆಯಲ್ಲಿ ಅವರು ತಮ್ಮ ಪ್ರದೇಶದ ನಿರ್ದಿಷ್ಟ ಸಮುದಾಯಗಳ ಜೀವನದ ವಿವರಗಳನ್ನು ಕೂಡ ಕಾದಂಬರಿಯಲ್ಲಿ ಬರುವಂತೆ ಬರೆದಿರುವರು.

ಇದೇ ಸಾಲಿನಲ್ಲಿ ಬರುವ ಶ್ರೀನಿವಾಸ ವೈದ್ಯರ 'ಹಳ್ಳಬಂತು ಹಳ್ಳ' ಕಾದಂಬರಿಯು ಧಾರವಾಡ ಸೀಮೆಯ ಗ್ರಾಮೀಣ ಬದುಕಿನ ಸಮೃದ್ಧವಾದ ವಿವರಗಳ ಸಮೇತ ಕತೆಯನ್ನು ಕಟ್ಟುತ್ತದೆ. ಹೀಗಾಗಿ ಕನ್ನಡ ಕಾದಂಬರಿಗಳು ಒಂದು ಬಗೆಯಲ್ಲಿ ನಮ್ಮ ಸಮಾಜದ ಚರಿತ್ರೆಯನ್ನು ಬರೆಯುವ ಅನಧಿಕೃತ ಚರಿತ್ರೆಯ ಕೃತಿಗಳು. ಅನಧಿಕೃತ ಸಮಾಜವಿಜ್ಞಾನದ ಕೃತಿಗಳು. ಈ ಕೆಲಸವನ್ನು ವೈದ್ಯರ ಕೃತಿಯು ಅರ್ಥಪೂರ್ಣವಾಗಿ ಮಾಡಿದೆ.

ಈ ಕಾದಂಬರಿಯ ವಿಶೇಷವೆಂದರೆ ಪರಂಪರೆ ಮತ್ತು ಆಧುನಿಕತೆಗಳ ನಡುವಣ ಸಂಘರ್ಷ ಮತ್ತು ಕೊಡುಕೊಳೆಯನ್ನು ಕುರಿತು ಬರೆದಿರುವುದು. ಇಷ್ಟು ಮಹತ್ವದ ಕಾದಂಬರಿಯು ಒಂದು ಅಧ್ಯಯನಕ್ಕೆ ಮುಗಿಯುವುದಿಲ್ಲ. ಇದನ್ನು ಅನೇಕ ಅಧ್ಯಯನಕಾರರು ಅನೇಕ ಅಧ್ಯಯನಗಳ ಮೂಲಕ ಅದರ ಒಳಗನ್ನು ಶೋಧಿಸಬಹುದು. 'ಹಳ್ಳ ಬಂತು ಹಳ್ಳ' ಕಾದಂಬರಿಯು ಇನ್ನೂ ಹೆಚ್ಚಿನ ಅಧ್ಯಯನಕ್ಕೆ ಒಳಪಡಬೇಕಾದ ಕಾದಂಬರಿಯಾಗಿದೆ. ಆದ್ದರಿಂದ ಇಲ್ಲಿ ಹೊಸ ಅಧ್ಯಯನದ ಸಾಧ್ಯತೆಗಳನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ.

ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯು ಒಂದು ಸಣ್ಣ ಪಟ್ಟಣದಲ್ಲಿರುವ ಬ್ರಾಹ್ಮಣ ಕುಟುಂಬದ ಜೀವನವನ್ನು ಮುಖ್ಯವಾಗಿಟ್ಟುಕೊಂಡು ಹುಟ್ಟಿಕೊಂಡಿದ. ಇದೇ ರೀತಿ ಶಂಕರ್ ಮೊಕಾಶಿ ಪುಣೇಕರ್ ರವರ 'ಗಂಗವ್ವ ಗಂಗಾಮಾಯಿ' ಕಾದಂಬರಿಯೂ ಧಾರವಾಡ ಪಟ್ಟಣದಲ್ಲಿರುವ ಬ್ರಾಹ್ಮಣರ ಜೀವನವನ್ನು ಕೇಂದ್ರವಾಗಿಟ್ಟುಕೊಂಡು ಹುಟ್ಟಿದ ಕಾದಂಬರಿ. ಈ ಎರಡೂ ಕಾದಂಬರಿಗಳನ್ನು ಇಟ್ಟುಕೊಂಡು ತೌಲನಿಕ ಅಧ್ಯಯನವನ್ನು ಮಾಡಿದರೆ, ಇಬ್ಬರೂ

ಲೇಖಕರ ವಿಶಿಷ್ಟತೆಗಳು ಮತ್ತು ಮಿತಿಗಳು ಗೊತ್ತಾಗುತ್ತವೆ. ಎರಡೂ ಕೃತಿಗಳ ನಡುವಿನ ಭಿನ್ನತೆ ಮತ್ತು ವಿಶಿಷ್ಟತೆಗಳು ತಿಳಿಯುತ್ತವೆ.

೨. ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಮೂರು ತಲೆಮಾರುಗಳ ಬದುಕಿನ ಚಿತ್ರಣವಿದೆ. ಕೊನೆಯ ತಲೆಮಾರಿನಲ್ಲಿ ರಾಮೂ ಎಂಬ ಪಾತ್ರವನ್ನು ಕಾಣಬಹುದು. ಈ ಪಾತ್ರವು ಸಾಂಪ್ರದಾಯಕ ಬದುಕಿಗಿಂತ ಆಧುನಿಕತೆಯ ವೈಚಾರಿಕತೆಯ ಕಡೆಗೆ ವಾಲುತ್ತದೆ. ಇದೇ ರೀತಿ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿಯೂ ಸಹ ಮೂರು ತಲೆಮಾರುಗಳ ಜೀವನಚಿತ್ರವಿದೆ. ಅಲ್ಲಿಯೂ ಕೊನೆಯ ತಲೆಮಾರಿನಲ್ಲಿ ರಾಮನೆಂಬ ಪಾತ್ರವು ಬರುತ್ತದೆ. ಅದು ಪರಂಪರೆಯಿಂದ ಶಕ್ತಿಯನ್ನು ಪಡೆಯುವತ್ತ ಯತ್ನಿಸುವ ಪಾತ್ರವಾಗಿದೆ. ಈ ಹಿನ್ನೆಲೆಯಲ್ಲಿ 'ಹಳ್ಳ ಬಂತು ಹಳ್ಳ' ಮತ್ತು 'ಮರಳಿ ಮಣ್ಣಿಗೆ' ಕಾದಂಬರಿಗಳನ್ನು ತೌಲನಿಕ ಅಧ್ಯಯನಕ್ಕೆ ಒಳಗು ಮಾಡಬಹುದು. ಇದರಿಂದ ಎರಡೂ ಕಾದಂಬರಿಗಳ ವಿಶಿಷ್ಟತೆಯನ್ನು ಅರಿಯಬಹುದು.

೩. ಕನ್ನಡದಲ್ಲಿ ವಿಧವೆಯರ ಶೋಚನೀಯ ಮತ್ತು ಹೋರಾಟದ ಬದುಕನ್ನು ಕುರಿತ ಅನೇಕ ಕತೆ ಕಾದಂಬರಿಗಳಿವೆ. ಅನಂತಮೂರ್ತಿ ಅವರ 'ಘಟಶ್ರಾದ್ಧ' ಕತೆಯು ಇದರಲ್ಲಿ ಒಂದು. ಎಂ.ಕೆ. ಇಂದಿರಾರವರ 'ಫಣಿಯಮ್ಮ' ಕಾದಂಬರಿ ಇನ್ನೊಂದು. ನಿರಂಜನ 'ಬನಶಂಕರಿ' ಕೂಡ ಇದೇ ತರಹದ ಕಾದಂಬರಿ. ವಸುಧೇಂದ್ರ ಅವರ ಕತೆಗಳಲ್ಲಿ ಕೂಡ ವಿಧವೆಯರ ಬದುಕು ಬರುತ್ತದೆ. ಇವುಗಳ ಹಿನ್ನೆಲೆಯಲ್ಲಿ 'ಹಳ್ಳಬಂತು ಹಳ್ಳ' ಕಾದಂಬರಿಯ ವಿಧವೆಯ ಜೀವನ ಚಿತ್ರವನ್ನು ಇಟ್ಟುಕೊಂಡು ನೋಡಬಹುದು.

೪. ಶ್ರೀನಿವಾಸ ವೈದ್ಯರ ಅನೇಕ ಸಣ್ಣಕತೆಗಳಲ್ಲಿ ವಿಧವೆಯರ ಬದುಕು ಬರುತ್ತದೆ. ಕನ್ನಡ ಸಾಹಿತ್ಯದಲ್ಲಿ ಇಷ್ಟೊಂದು ವಿಧವೆಯರ ಬದುಕನ್ನು ಚಿತ್ರಿಸಿದ ಲೇಖಕರು ಮತ್ತೊಬ್ಬರಿಲ್ಲ ಎನ್ನಬಹುದು. ವೈದ್ಯರ ಕಾದಂಬರಿ ಮತ್ತು ಕತೆಗಳಲ್ಲಿ ಬರುವ ವಿಧವೆಯರನ್ನು ಇಟ್ಟುಕೊಂಡು ಕೂಡ ಈ ತೌಲನಿಕ ಅಧ್ಯಯನ ಮಾಡಬಹುದು.

೫. ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟದ ವಸ್ತುವನ್ನುಳ್ಳ ಅನೇಕ ಕಾದಂಬರಿಗಳಿವೆ. ಅವುಗಳಲ್ಲಿ ಬಸವರಾಜ ಕಟ್ಟೀಮನಿಯವರ 'ಮಾಡಿಮಡಿದವರು' ಕೂಡ ಒಂದು. ಕಟ್ಟೀಮನಿಯವರ ಕಾದಂಬರಿ ಬೆಳಗಾವಿ ಭಾಗಕ್ಕೆ ಸಂಬಂಧಪಟ್ಟಿದ್ದು. ವೈದ್ಯರದು

ಧಾರವಾಡ ಭಾಗಕ್ಕೆ ಸಂಬಂಧಪಟ್ಟಿದ್ದು. ಈ ಎರಡೂ ಕಾದಂಬರಿಗಳನ್ನು ಜತೆಗಿಟ್ಟುಕೊಂಡು ತೌಲನಿಕ ಅಧ್ಯಯನ ಮಾಡಬಹುದು.

೬. ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಧಾರವಾಡದ ಸುತ್ತಮುತ್ತಲಿನ ಗ್ರಾಮೀಣ ಪ್ರದೇಶದಲ್ಲಿ ನಡೆಯುವ ಒಂದು ಶತಮಾನದ ಜೀವನ ಚಿತ್ರವಿದೆ. ಈ ಕಾದಂಬರಿಯು ವಾಸ್ತವವಾದಿ ಮಾರ್ಗದ ಕಾದಂಬರಿಯಾಗಿದೆ. ಈ ಕಾರಣದಿಂದ ಈ ಕೃತಿಯನ್ನು ಸಮಾಜಶಾಸ್ತ್ರ, ಚರಿತ್ರೆ ಮುಂತಾದ ಬೇರೆ ಜ್ಞಾನ ಶಾಖೆಗಳ ಹಿನ್ನೆಲೆಯಲ್ಲಿ ಅಂತರ್‌ಶಿಸ್ತೀಯ ಅಧ್ಯಯನಕ್ಕೆ ಒಳಪಡಿಸಬಹುದು.

೭. ಎಂ.ಎಸ್.ಪುಟ್ಟಣನವರ 'ಮಾಡಿದ್ದುಣ್ಣೋ ಮಹರಾಯ', ಗುಲ್ವಾಡಿ ವೆಂಕಟರಾವ್ ಅವರ 'ಇಂದಿರಾಬಾಯಿ', ರಾವ್‌ಬಹಾದ್ದೂರ್ ಅವರ 'ಗ್ರಾಮಾಯಣ' ಮುಂತಾದ ಕಾದಂಬರಿಗಳು ವಸಾಹತುಶಾಹಿ ಆಳ್ವಿಕೆಯ ಚಿತ್ರಗಳನ್ನು ಒಳಗೊಂಡಿರುವ ಕೃತಿಗಳು. ಅದೇ ರೀತಿ ಪ್ರಸ್ತುತ ಈ ಕಾದಂಬರಿಯಲ್ಲಿಯು ಸಹ ವಸಾಹತುಶಾಹಿ ಆಳ್ವಿಕೆಯ ಚಿತ್ರಣವಿದೆ. ಈ ಹಿನ್ನೆಲೆಯಲ್ಲಿ ಮೇಲಿನ ಯಾವುದಾದರೂ ಒಂದು ಕಾದಂಬರಿಯನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಬಹುದು.

೮. ಪ್ರಸ್ತುತ ಈ ಕಾದಂಬರಿಯ ಅಧ್ಯಯನದಿಂದ ಉತ್ತರ ಕರ್ನಾಟಕದ ಭಾಷೆಯನ್ನು ಸೂರೆಹೊಡೆದಿದೆ. ಈ ಕಾದಂಬರಿಯನ್ನು ಭಾಷಾಶಾಸ್ತ್ರಜ್ಞರು ಭಾಷಿಕ ದೃಷ್ಟಿಯಿಂದ ಅಧ್ಯಯನಕ್ಕೆ ತೊಡಗಿಸಬಹುದು.

೯. ಪ್ರಸ್ತುತ ಕಾದಂಬರಿಯು ಧಾರವಾಡದ ಸುತ್ತಮುತ್ತಲಿನ ಗ್ರಾಮೀಣ ಪ್ರದೇಶದ ಬದುಕನ್ನು ಕಟ್ಟಿಕೊಡುತ್ತದೆ. ಈ ಹಿನ್ನೆಲೆಯಲ್ಲಿ ವೈದ್ಯರು ಕಾದಂಬರಿಯಲ್ಲಿ ಗ್ರಾಮೀಣ ಪ್ರಜ್ಞೆ ಎಂಬ ವಿಷಯದ ಮೇಲೆ ಅಧ್ಯಯನ ಮಾಡಬಹುದು.

೧೦. ಕನ್ನಡದ ಅನೇಕ ಕಾದಂಬರಿಗಳು ಕರ್ನಾಟಕ ಮತ್ತು ಮುಂಬೈ ಹೀಗೆ ಎರಡೂ ಭೂಮಿಕೆಯಲ್ಲಿ ನಡೆಯುತ್ತವೆ. ಅವುಗಳಲ್ಲಿ ಶಾಂತಿನಾಥ ದೇಸಾಯಿ, ಬಸವರಾಜ ಕಟ್ಟೀಮನಿ ಅವರ ಕಾದಂಬರಿಗಳು ಮುಖ್ಯವಾದವು. ಕನ್ನಡ ಕಾದಂಬರಿಗಳಲ್ಲಿ ಚಿತ್ರಣಗೊಂಡಿರುವ ಮುಂಬೈ ಎಂಬ ವಿಷಯವನ್ನು ಇಟ್ಟುಕೊಂಡು ವೈದ್ಯ, ದೇಸಾಯಿ, ಕಟ್ಟೀಮನಿ, ಚಿತ್ತಾಲ, ಜಯಂತಕಾಯ್ಕಿಣಿ, ವ್ಯಾಸರಾಯ ಬಲ್ಲಾಳ ಅವರ ಕೃತಿಗಳನ್ನು ಅಧ್ಯಯನಮಾಡುವ ಇನ್ನೊಂದು ಸಾಧ್ಯತೆಯಿದೆ.

## ೬.೩. ಕೊನೆಯ ಮಾತು

ಶ್ರೀನಿವಾಸ ವೈದ್ಯರು ಕನ್ನಡದಲ್ಲಿ ಈ ಹಿಂದೆ ಹರಟೆಗಳನ್ನು ಬರೆಯುತ್ತಿದ್ದ ಲೇಖಕರು. ನಂತರ ಅವರು ಸಣ್ಣಕತೆಗಳನ್ನು ಬರೆಯಲು ಆರಂಭಿಸಿದರು. ಇದು ಅವರು ಮೊದಲನೇ ಕಾದಂಬರಿ. ತಮ್ಮ ಮೊದಲನೇ ಕಾದಂಬರಿಯನ್ನು ಅವರು ೭೦ ವಯಸ್ಸಿನ ನಂತರ ಬರೆದರು. ಮತ್ತು ಇದಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಬಂದಿತು. ಇದರ ಜತೆಗೆ ಅವರ ಕಾದಂಬರಿಯು ಅಪಾರ ಓದುಗರನ್ನು ಪಡೆಯಿತು. ತಮ್ಮ ಮೊದಲನೇ ಕೃತಿಗೆ ಇಷ್ಟುದೊಡ್ಡ ಗೌರವವನ್ನು ಮತ್ತು ಓದುಗರ ಪ್ರೀತಿಯನ್ನು ಪಡೆದ ಲೇಖಕರು ಬಹಳ ಜನರಿಲ್ಲ. ಕನ್ನಡದಲ್ಲಿ ದೊಡ್ಡ ಕಾದಂಬರಿಗಳ ಯುಗ ಮುಗಿದುಹೋಯಿತು ಎನ್ನುವ ಕಾಲಕ್ಕೆ ಕುಂವೀ ಮತ್ತು ವೈದ್ಯರು ಏಕಕಾಲಕ್ಕೆ ದೊಡ್ಡಕಾದಂಬರಿಗಳನ್ನು ಬರೆದರು. ಆದರೆ ಕುಂವೀಯವರ ಕಾದಂಬರಿಯು ಅಷ್ಟೊಂದು ದೊಡ್ಡ ಯಶಸ್ಸನ್ನು ಪಡೆಯಲಿಲ್ಲ. ಶ್ರೀನಿವಾಸ ವೈದ್ಯರ ಕೃತಿ ಯಶಸ್ಸನ್ನು ಪಡೆಯಿತು. ಹಲವು ಬಗೆಯ ಅಧ್ಯಯನಳಿಗೆ ಆಹ್ವಾನ ನೀಡುವಂತಿರುವ ಮತ್ತು ಅಂತಹ ಶಕ್ತಿಯನ್ನು ಸಹ ಪಡೆದಿರುವ 'ಹಳ್ಳಬಂತು ಹಳ್ಳ' ಕಾದಂಬರಿಯು ಕನ್ನಡದ ಮಹತ್ವದ ಕೃತಿಗಳಲ್ಲಿ ಒಂದು.

## ಅಭ್ಯಾಸಸೂಚಿ


೧. ಅನಂತಮೂರ್ತಿ ಯು.ಆರ್., ಸಂಸ್ಕಾರ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೨

೨. ಕುವೆಂಪು ಸಮಗ್ರಗದ್ಯ, ಸಂಪುಟ ೧, ಸಂ.ಡಾ.ಕೆ.ಸಿ. ಶಿವಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೪

೩. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೬೭

೪. ಕುವೆಂಪು ಕಾದಂಬರಿಗಳು, ಸಂ. ಗುರುಪಾದ ಮರಿಗುದ್ದಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪

೫. ಗಿರಡ್ಡಿ ಗೋವಿಂದರಾಜ, ಕಾದಂಬರಿ ವಸ್ತು ಮತ್ತು ತಂತ್ರ , ಸ್ನೇಹ ಪ್ರಕಾಶನ, ಬೆಂಗಳೂರು. ೧೯೮೭

೬. ಗುಲ್ವಾಡಿ ವೆಂಕಟರಾವ್, ಇಂದಿರಾಬಾಯಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೮೫

೭. ಪುಟ್ಟಣ್ಣ, ಎಂ.ಎಸ್, ಮಾಡಿದ್ದುಣ್ಣೋ ಮಹಾರಾಯ, ಕಾವ್ಯಾಲಯ, ಮೈಸೂರು, ೧೯೬೭

೮. ಬಸವರಾಜ ಕಟ್ಟೀಮನಿ, ಮಾಡಿಮಡಿದವರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫

೯. ಮಿರ್ಜಿ ಅಣ್ಣರಾಯ, ನಿಸರ್ಗ, ಮನೋಹರ ಗ್ರಂಥಮಾಲಾ, ಧಾರವಾಡ, ೧೯೬೨

೧೦. ರಾವ್ ಬಹದ್ದೂರ್, ಗ್ರಾಮಾಯಣ, ಮನೋಹರ ಗ್ರಂಥಮಾಲಾ, ಧಾರವಾಡ, ೧೯೫೭

೧೧. ಶಂಕರ್ ಮೊಕಾಶಿ ಪುಣೇಕರ್, ಗಂಗವ್ವ ಗಂಗಾಮಾಯಿ, ಸುರುಚಿ ಪ್ರಕಾಶನ, ಮೈಸೂರು, ೧೯೭೫

೧೨. ಶಿವರಾಮ ಕಾರಂತ, ಚೋಮನದುಡಿ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೭೫

೧೩. ಶಿವರಾಮ ಕಾರಂತ, ಮರಳಿಮಣ್ಣಿಗೆ, ಹರ್ಷ ಪ್ರಕಟಣಾಲಯ, ಪುತ್ತೂರು, ೧೯೬೦

೧೪. ಶ್ರೀನಿವಾಸ ವೈದ್ಯ, ಹಳ್ಳ ಬಂತು ಹಳ್ಳ, ಮನೋಹರ ಗ್ರಂಥಮಾಲಾ, ಧಾರವಾಡ, ೨೦೦೪

೧೫. ಶ್ರೀನಿವಾಸ ವೈದ್ಯ, ಅಗ್ನಿಕಾರ್ಯ, ಮನೋಹರ ಗ್ರಂಥಮಾಲಾ. ಧಾರವಾಡ, ೨೦೦೪

೧೬. ಶೇಷಗಿರಿರಾವ್. ಎಲ್.ಎಸ್. ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೮

